# ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಕಾರ್ಯನಿರ್ವಹಣೆ: ಒಂದು ಆರ್ಥಿಕ ಅಭಿವೃದ್ಧಿ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ವಿಷಯದಲ್ಲಿ ಎಂ.ಫಿಲ್.
ಪದವಿಗಾಗಿ ಸಾದರಪಡಿಸಿದ ನಿಬಂಧ)

ಸಂಶೋಧಕರು

**ಮಹಾದೇವ. ಬಿ. ಕುಲಮೂರ**

ಮಾರ್ಗದರ್ಶಕರು

**ಡಾ. ಸಿ. ಆರ್. ಗುಡಸಿ**

ಅಭಿವೃದ್ಧಿ ಅಧ್ಯಯನ ವಿಭಾಗ
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ




ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ - 591 220

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ,
ಹಂಪಿ

೨೦೧೫

# ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಕಾರ್ಯನಿರ್ವಹಣೆ: ಒಂದು ಆರ್ಥಿಕ ಅಭಿವೃದ್ಧಿ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ವಿಷಯದಲ್ಲಿ ಎಂ.ಫಿಲ್.
ಪದವಿಗಾಗಿ ಸಾದರಪಡಿಸಿದ ನಿಬಂಧ)



ಸಂಶೋಧಕರು

**ಮಹಾದೇವ. ಬಿ. ಕುಲಮೂರ**

ಮಾರ್ಗದರ್ಶಕರು

**ಡಾ. ಸಿ. ಆರ್. ಗುಡಸಿ**

ಅಭಿವೃದ್ಧಿ ಅಧ್ಯಯನ ವಿಭಾಗ
ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ




**ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,**
**ಹಾರೂಗೇರಿ – 591 220**

**ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ,**
**ಹಂಪಿ**

೨೦೧೫

# ಘೋಷಣಾ ಪತ್ರ

**'ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಕಾರ್ಯನಿರ್ವಹಣೆ ಒಂದು ಆರ್ಥಿಕ ಅಭಿವೃದ್ಧಿ ಅಧ್ಯಯನ'** ಎಂಬ ನಿಬಂಧವನ್ನು ಡಾ. ಸಿ. ಆರ್. ಗುಡಸಿ. ಅವರ ಮಾರ್ಗದರ್ಶನದಲ್ಲಿ ನಾನು ಸಿದ್ದಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ.ಆರ್.ದರೂರು ಸಂಶೋಧನಾ ಕೇಂದ್ರದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : 31/8/1

ಮಹಾದೇವ. ಬಿ. ಕುಲಮೂರ

ಎಂ.ಫಿಲ್.ವಿದ್ಯಾರ್ಥಿ
ಶ್ರೀ ಬಿ.ಆರ್.ದರೂರು
ಸಂಶೋಧನಾ ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

**ಮಹಾದೇವ ಬಿ. ಕುಲಮೂರ** ಇವರು **ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಕಾರ್ಯನಿರ್ವಹಣೆ ಒಂದು ಆರ್ಥಿಕ ಅಭಿವೃದ್ಧಿ ಅಧ್ಯಯನ** ಎಂಬ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಹಾರೂಗೇರಿ ಶ್ರೀ ಬಿ.ಆರ್.ದರೂರು ಸಂಶೋಧಣಾ ಕೇಂದ್ರದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಎಂ. ಫಿಲ್ ಪದವಿಗಾಗಿ ಸಲ್ಲಿಸುತ್ತಿದ್ದು, ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಈ ಮೊದಲು ಎಲ್ಲಿಯೂ ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ಧೃಡಿಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : 31/8/1)

ಮಾರ್ಗದರ್ಶಕರು

ಡಾ. ಸಿ.ಆರ್. ಗುಡಸಿ
ಶ್ರೀ ಬಿ.ಆರ್.ದರೂರು
ಸಂಶೋಧನಾ ಕೇಂದ್ರ, ಹಾರೂಗೇರಿ

# ಕೃತಜ್ಞತೆ

ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ರೈತ ಸದಸ್ಯರಿಗೆ ಪ್ರಮುಖ ಹಣಕಾಸಿನ ಸಂಘವಾಗಿರುತ್ತದೆ ಇದು ಪತ್ತಿನ ಕಾರ್ಯನಿರ್ವಹಣೆ ಹಾಗೂ ವ್ಯವಹಾರದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಮೂರನೆಯ ಸ್ಥಾನದಲ್ಲಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಸಂಶೋಧನಾತ್ಮಕ ನಿಬಂಧಗಳು ನನ್ನ ಗಮನಕ್ಕೆ ಬಾರದೇ ಇದ್ದರಿಂದ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಕಾರ್ಯನಿರ್ವಹಣೆ : ಒಂದು ಆರ್ಥಿಕ ಅಭಿವೃದ್ಧಿ ಅಧ್ಯಯನ ಎಂಬ ಶಿರ್ಷಕೆಯಡಿಯಲ್ಲಿ ಐಚ್ಛಿಕ ಅಧ್ಯಯನ ವಿಷಯವನ್ನಾಗಿ ಆಯ್ದುಕೊಳ್ಳಲಾಗಿದೆ. ಈ ನಿಬಂಧವನ್ನು ರಚಿಸುವಲ್ಲಿ ಪ್ರಮುಖ ಕಾರಣೀಭೂತರಾದ ಮತ್ತು ಸಹಾಯ ಸಹಕಾರವನ್ನು ನೀಡಿದ ಮಹನಿಯರನ್ನು ಇಲ್ಲಿ ಸ್ಮರಿಸುವದು ನನ್ನ ಪ್ರಥಮ ಕರ್ತವ್ಯವಾಗಿದೆ.

ಪ್ರಥಮವಾಗಿ **ಡಾ.ಸಿ.ಆರ್.ಗುಡಸಿ** ಮುಖ್ಯಸ್ಥರು, ಅಭಿವೃದ್ಧಿ ಅಧ್ಯಯನ ವಿಭಾಗ ಶ್ರೀ **ಬಿ.ಆರ್.ದರೂರ** ಸಂಶೋಧನಾ ಕೇಂದ್ರ ಹಾರೂಗೇರಿ ಈ ಗುರುಗಳ ಮಾರ್ಗದರ್ಶನ ಪಡೆಯುವ ಅವಕಾಶ ದೊರಕಿದ್ದು ನನ್ನ ಸುದೈವೆಂದು ಹೇಳುವೆ. ಕಾರಣ ಅವರು ತೋರಿಸಿದ ಸಹಕಾರ, ಪ್ರೋತ್ಸಾಹ ಅತ್ಯ ಅಮೂಲ್ಯವಾದ ಪ್ರೀತಿ ಮತ್ತು ಮಾರ್ಗದರ್ಶನ ಇವು ನಿಬಂಧ ರೂಪಗೊಳ್ಳುವಲ್ಲಿ ಅನುಕೂಲವಾಯಿತು. ಈ ನಿಬಂಧದ ಶಿರ್ಷಕೆಯನ್ನು ಸಹ ಅವರೇ ಹಾಕಿಕೊಟ್ಟಿದ್ದರಿಂದ ಅವರಿಗೆ ನಾನು ಚಿರಋಣಿಯಾಗಿರುವೆ.

ನನ್ನನ್ನು ಎಂ.ಫಿಲ್. ಮಾಡಲು ಪ್ರೋತ್ಸಾಹಿಸಿ ಸಹಕಾರ ನೀಡಿದ ನನ್ನ ಮಹಾವಿದ್ಯಾಲಯದ ಪ್ರಾಚಾರ್ಯರು ಸುರೇಶ ಹನಗಂಡಿ ಮತ್ತು ಸಿಬ್ಬಂದಿ ವರ್ಗಕ್ಕೂ ಹಾಗೂ ಎಸ್.ಆರ್.ಇ. ಸಂಸ್ಥೆಯ ಆಡಳಿತ ಮಂಡಳಿಯ ಅಧ್ಯಕ್ಷರಾದ ಶ್ರೀ ಜಿ.ಎಸ್. ಪಾಟೀಲ ಹಾಗೂ ಉಪಾಧ್ಯಕ್ಷರಾದ ಶ್ರೀ ಬಿ.ಆರ್.ಕಡಾಡಿ ಮತ್ತು ಆಡಳಿತ ಮಂಡಳಿಯ ಸರ್ವಸದಸ್ಯರಿಗೂ, ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ, ಅಧ್ಯಕ್ಷರಾದ ಶ್ರೀ ಬಿ.ಬಿ. ಬೆಳಕೂಡ ಮತ್ತು ಆಡಳಿತ ಮಂಡಳಿಯ ಸರ್ವನಿರ್ದೇಶಕರಿಗೂ ನನ್ನ ಅನಂತ ಕೃತಜ್ಞತೆಗಳು.

ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸದಾ ಸಲಹೆ ಸಹಕಾರ ಮಾರ್ಗದರ್ಶನ ನೀಡಿದ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ನಿರ್ದೇಶಕರಾದ ಡಾ. ವಿ.ಎಸ್. ಮಾಳಿ ಹಾಗೂ ಸಿಬ್ಬಂದಿ ವರ್ಗದ ಶಂಕರ ಘಟನಟ್ಟಿ ನನ್ನ ಉಳಿದ ಪೂಜ್ಯ ಗುರುವೃಂದಕ್ಕೆ ಅನಂತ ಪ್ರಣಾಮಗಳು.

ನನ್ನ ಜೀವನಕ್ಕೆ ಬೆನ್ನಲುಬಾಗಿ ನಿಂತು ಕಷ್ಟ-ಸುಖಗಳಲ್ಲಿ ಭಾಗಿಯಾಗಿದ್ದ ನನ್ನ ತಂದೆ ದಿ. ಭರಮಪ್ಪ ಕುಲಮೂರ ತಾಯಿ ಲಕ್ಷ್ಮವ್ವ ಹಾಗೂ ನನ್ನ ಸಹೋದರಿಯರನ್ನು ಎಷ್ಟು ನೆನೆದರೂ ಕಡಿಮೆಯೇ.

ಈ ನಿಬಂಧ ರಚಿಸುವಲ್ಲಿ ಗ್ರಂಥ ಸಹಾಯ ಮಾಡಿದ ಗ್ರಂಥಾಲಯದ ಮುಖ್ಯಸ್ಥರಾದ ಶ್ರೀ ಬಿ.ಬಿ.ವಾಲಿ ಹಾಗೂ ಕಾರ್ಯಾಲಯದ ಅಧೀಕ್ಷಕರಾದ ಬಿ.ಎಮ್.ಶಿಗೀಹಳ್ಳಿ ಮತ್ತು ಸಿಬ್ಬಂದಿಗೂ ನನ್ನ ಅನಂತ ಧನ್ಯವಾದಗಳು.

ಹಗಲಿರಳು ನನ್ನ ಶ್ರೇಯಸ್ಸನ್ನು ಬಯಸುವ ನನ್ನ ಪತ್ನಿ ಶ್ರೀಮತಿ ಸುವರ್ಣಾ ಮತ್ತು ಮಕ್ಕಳಾದ ವಿವೇಕಾನಂದ, ವಿದ್ಯಾ ಮಾವನಾದ ರಾವಸಾಹೇಬ ಚೌಗಲಾ, ಶ್ರೀದರ ಚೌಗಲಾ, ಮಹಾಂತೇಶ, ಪರಮಾತ್ಮ ಇವರಿಗೂ ನನ್ನ ನಮಸ್ಕಾರಗಳು.

ನನ್ನ ಅಧ್ಯಯನ ಕಾರ್ಯದಲ್ಲಿ ಸಂಶೋಧನಾ ಗ್ರಂಥ ರಚಿಸುವಲ್ಲಿ ಸಂಪನ್ಮೂಲದ ಸಹಕಾರ ನೀಡಿದ ಪ್ರೊ. ಚಂದ್ರಶೇಖರ ಲಕ್ಷಟ್ಟಿ, ಪ್ರೊ. ಬೆನಚಣಮರಡಿ, ಪ್ರೊ. ಎಸ್. ಎಮ್. ಐಹೊಳೆ, ಶ್ರೀ ಬಾಳಪ್ಪಾ ಮೇತ್ರಿ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಕಾರ್ಯನಿರ್ವಾಹಕರು ಹಾಗೂ ಲೆಕ್ಕಿಕರಾದ ಬಸವರಾಜ ಬಾಗೇವಾಡಿ, ಪಟ್ಟಣ ಪಂಚಾಯತಿ ಸಿಬ್ಬಂದಿಯವರಿಗೂ ನನ್ನ ಧನ್ಯವಾದಗಳು.

ಕೊನೆಯದಾಗಿ ಕಂಪ್ಯೂಟರ್ ಅಕ್ಷರ ಜೋಡನೆಯನ್ನು ಸುಂದರವಾಗಿ ಮುದ್ರಿಸಿಕೊಟ್ಟ ಲಕ್ಷ್ಮಣ ಮಾಳಗಿ ಅವರಿಗೂ ನನ್ನ ಅಭಿನಂದನೆಗಳು.

ಸ್ಥಳ : ಹಾರೂಗೇರಿ
ದಿನಾಂಕ :

ಸಂಶೋಧನಾ ವಿದ್ಯಾರ್ಥಿ
**ಮಹಾದೇವ ಕುಲಮೂರ**

# ಪರಿವಿಡಿ

# ಕೋಷ್ಟಕಗಳು

# ನಕಾಶೆಗಳ ಯಾದಿ

ಕರ್ನಾಟಕ ರಾಜ್ಯದ ನಕ್ಷೆ



ಬೆಳಗಾವಿ ಜಿಲ್ಲೆಯ ನಕ್ಷೆ



# ಅಧ್ಯಾಯ – ಒಂದು

## ಪ್ರವೇಶ

## ಅಧ್ಯಯನದ ಮಹತ್ವ, ಉದ್ದೇಶಗಳು, ವಿಧಾನ, ವ್ಯಾಪ್ತಿ, ವಿನ್ಯಾಸ.

೧.೧ ಪ್ರಸ್ತಾವನೆ.

೧.೨ ಅಧ್ಯಯನದ ಮಹತ್ವ

೧.೩ ವಿಷಯ ವಸ್ತುವಿನ ವಿವರ.

೧.೪ ಅಧ್ಯಯನದ ಉದ್ದೇಶಗಳು.

೧.೫ ಅಧ್ಯಯನದ ವಿಧಾನ.

೧.೬ ಅಧ್ಯಯನದ ವ್ಯಾಪ್ತಿ.

೧.೭ ಅಧ್ಯಯನದ ವಿನ್ಯಾಸ.

೧.೮ ಅಧ್ಯಯನದ ನಿಬಂಧನೆ

ಅಧ್ಯಾಯ ಒಂದು

# ಅಧ್ಯಯನದ ಮಹತ್ವ, ವಿಷಯ ವಸ್ತುವಿನ ವಿವರ, ಉದ್ದೇಶಗಳು, ವಿಧಾನ, ವಿನ್ಯಾಸ

## ೧:೧ ಪ್ರಸ್ತಾವನೆ :

ಪ್ರಾ.ಕೃ.ಪತ್ತಿನ ಸಹಕಾರಿ ಸಂಘಗಳ ಕುರಿತು ವಿವರವಾಗಿ ಅಭ್ಯಸಿಸುವ ಮುಂಚೆ ಸಾರ್ವತ್ರಿಕವಾಗಿ ಸಹಕಾರಿ ಸಂಘದ ಸ್ವರೂಪವನ್ನು ಪರಿಚಯಿಸುವುದು ಸೂಕ್ತವಾಗಿದೆ.

ಸಹಕಾರಿ ಸಂಘದ ಅರ್ಥ : ಸಹಕಾರ ಎಂಬ ಪದವು ಆಂಗ್ಲ ಭಾಷೆಯ ಕೊ–ಆಪರೇಟಿವ್ ಎಂಬ ಶಬ್ದದಿಂದ ಬಂದಿದೆ. ಆಂಗ್ಲ ಭಾಷೆಯಲ್ಲಿರುವ ಕೊ–ಆಫ್ ರೇಟಿವ್ ಎಂಬುದಕ್ಕೆ ಜೊತೆಗೂಡಿ ಕಾರ್ಯನಿರ್ವಹಿಸುವುದು. ಒಂದು ಅರ್ಥ ಮತ್ತು ಕೋ ಅಂದರೆ ಜೊತೆಗೂಡಿ ಆಪರೇಟಿವ್ ಎಂದರೆ ಕಾರ್ಯನಿರ್ವಹಣೆ ಎಂದು ಇನ್ನೊಂದು ಅರ್ಥವಾಗುತ್ತದೆ.[೧]

ಸಾಮಾನ್ಯವಾಗಿ ಸಹಕಾರಿ ಸಂಘ ಎಂದರೆ ಸ್ವ ಇಚ್ಚೆಯಿಂದ ಜೊತೆಗೂಡಿ ಕಾರ್ಯನಿರ್ವಹಿಸುವುದು ಅಂದರೆ ನಿರ್ದಿಷ್ಟ ಆರ್ಥಿಕ ಉದ್ದೇಶಗಳನ್ನು ಹೊಂದಿರುವ ಜನರು ಆ ಉದ್ದೇಶಗಳ ಈಡೇರಿಕೆಗಾಗಿ ಅಥವಾ ಸೌಲಭ್ಯಗಳನ್ನು ಪಡೆಯುವುದಕ್ಕಾಗಿ ಸ್ವಯಂ ಪ್ರೇರಿತವಾಗಿ ಒಂದು ಸಹಕಾರಿ ಸಂಘವನ್ನು ಸ್ಥಾಪಿಸಿ, ಆ ಸಹಕಾರಿ ಸಂಘದ ಮೂಲಕ ಸೌಲಭ್ಯಗಳನ್ನು ಪಡೆಯುವುದು. ತಾನು ಎಲ್ಲರಿಗಾಗಿ ಎಲ್ಲರೂ ತನಗಾಗಿ ಎಂಬ ತತ್ವದೊಂದಿಗೆ ನಿರ್ದಿಷ್ಟ ಉದ್ದೇಶಗಳ ಈಡೇರಿಕೆಗಾಗಿ ಸ್ವ ಇಚ್ಚೆಯಿಂದ ಒಂದುಗೂಡಿ ಸದಸ್ಯತ್ವ ಪಡೆದು ಕಾರ್ಯನಿರ್ವಹಿಸುವುದೇ ಸಹಕಾರಿ ಸಂಘ ಎನ್ನುವರು.

ಆದ್ದರಿಂದಲೇ ಸಹಕಾರಿ ಸಂಘಗಳನ್ನು ಜನರು ಪಡೆಯುವ ಸೌಲಭ್ಯಗಳು ಮತ್ತು ಉದ್ದೇಶಗಳ ಆಧಾರದ ಮೇಲೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಕೈಗಾರಿಕಾ ಸಹಕಾರಿ ಸಂಘಗಳು, ರೈತರ ಸೇವಾ ಸಂಘಗಳು, ಮರಾಟ ಸಹಕಾರಿ ಸಂಘಗಳು, ಗ್ರಾಹಕರ ಸಹಕಾರಿ ಸಂಘಗಳು ನೇಕರಾರರ ಸಹಕಾರಿ ಸಂಘಗಳು, ನೀರು ಬಳಕೆದಾರರ ಸಹಕಾರಿ ಸಂಘಗಳು, ಉಣ್ಣೆ ಉತ್ಪಾದನೆ ಪಶು ಸಂಗೋಪನಾ ಸಹಕಾರಿ ಸಂಘಗಳು ಮತ್ತು ಹಾಲು ಉತ್ಪಾದಕರ ಸಹಕಾರಿ ಸಂಘಗಳು ಮುಂತಾದ ಸಹಕಾರಿ ಸಂಘಗಳ ಪರಿ ಕಲ್ಪನೆಗಳನ್ನು ಇಲ್ಲಿ ಬಳಸಲಾಗುತ್ತದೆ.

---

೧. 'ಸಹಕಾರದ ತತ್ವಗಳು' : ಇ.ಎಸ್.ಬೊಗಾರ್ಡಸ್ ಪುಟ ಸಂಖ್ಯೆ :೨

ಆರ್ಥಿಕ ವ್ಯವಸ್ಥೆಯಲ್ಲಿ ಶ್ರೀಮಂತ ರೈತರು ಮತ್ತು ಬಡ ರೈತರು ಅಂತರವಿರುವುದರಿಂದ ಅಂದರೆ ರೈತಾಪಿ ವರ್ಗದಲ್ಲಿ ಉಳ್ಳವರು ಮತ್ತು ಉಳ್ಳದವರು ಅಥವಾ ಆರ್ಥಿಕ ವೈಶಮ್ಯದ ನಿವಾರಣೆಗೆ ಈ ಸಹಕಾರಿ ಸಂಘವನ್ನು ಸ್ಥಾಪಿಸಬಹುದು. ಸಣ್ಣ ಮತ್ತು ಅತೀ ಸಣ್ಣರೈತರ ಆರ್ಥಿಕಗಾಗಿ ಸಾಲದ ಸೌಲಭ್ಯಗಳನ್ನು ಕೊಡುತ್ತದೆ.

ಇದು ಒಂದು ನಿರ್ಧಿಷ್ಟ ಉದ್ದೇಶಗಳನ್ನು ಪಡೆಯುವ ಸಲುವಾಗಿ ಸ್ಥಾಪಿತವಾದ ಒಂದು ಸಹಕಾರಿ ಸಂಘದ ವ್ಯವಸ್ಥೆಯಾಗಿದೆ. ಈ ಸಂಘದ ಮೂಲಕ ಆರ್ಥಿಕ ಸೌಕರ್ಯ ಪಡೆದು ರೈತ ಸದಸ್ಯರು ಆದಾಯ ಹೆಚ್ಚಿಸಿಕೊಂಡು ತಮ್ಮ ಜೀವನಮಟ್ಟ ಸುಧಾರಿಸಿಕೊಳ್ಳಬಹುದು.

ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ಅಧ್ಯಯನ ಎಂದರೆ ರೈತಾಪಿ ಸದಸ್ಯರು ಇದರಿಂದ ಸಾಲ ಸೌಲಭ್ಯಗಳನ್ನು ಪಡೆದು, ನೀರಾವರಿ ಸೌಲಭ್ಯ, ಉತ್ತಮ ಅಧಿಕ ಇಳುವರಿ ಕೊಡುವ ಬೀಜಗಳು, ರಾಸಾಯನಿಕ ಗೊಬ್ಬರಗಳು, ಆಧುನಿಕ ಕೃಷಿ ಸಲಕರಣೆಗಳನ್ನು ಕೊಂಡು ಸಾಗುವಳಿಯಲ್ಲಿ ಉಪಯೋಗಿಸಿ ಅಧಿಕ ಆದಾಯ ಪಡೆಯುವ ಚಟುವಟಿಕೆಯ — ಪತ್ತಿನ ನೀತಿಗಳ ಅಧ್ಯಯನವಾಗಿದೆ.

ಹೀಗೆ ಸಹಕಾರಿ ಸಂಘ ಎಂದರೆ ಪತ್ತನ್ನು ಅಷ್ಟೇ ಒದಗಿಸುವ ಕಾರ್ಯ ಮಾತ್ರವಲ್ಲ. ಅದು ರೈತ ಸದಸ್ಯರಿಗೆ ಕೃಷಿ ಚಟುವಟಿಕೆಗಳಲ್ಲಿ ಬೆಳೆಗಳ ಬಗ್ಗೆ ಮಾಹಿತಿ ಒದಗಿಸುವ ಒಂದು ಆರ್ಥಿಕ ವ್ಯವಸ್ಥೆಯಾಗಿದೆ. ಅಂದರೆ ಈ ಸಹಕಾರಿ ಸಂಘವು ಮಾನಸಿಕ ಮತ್ತು ಭೌತಿಕ ಎರಡು ವಿಷಯಗಳನ್ನು ಒಳಗೊಂಡಿರುತ್ತದೆ.

**೧. ೨. ಅಧ್ಯಯನದ ಮಹತ್ವ :**

ಕಲ್ಲೋಳಿಯ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಆರ್ಥಿಕ ಅಭಿವೃದ್ಧಿಯ ಅಧ್ಯಯನವು ಬಹಳ ಪ್ರಸ್ತುತವಾಗಿದೆ. ಈ ಅಧ್ಯಯನದಿಂದ ಈ ಭಾಗದಲ್ಲಿರುವ ವಿವಿಧ ರೈತಾಪಿ ಸದಸ್ಯರಿಗೆ ಹೇಗೆ ಮಹತ್ವದ್ದಾಗಿ ಎಂಬುದನ್ನು ಸ್ಪಷ್ಟಪಡಿಸಲಾಗುತ್ತದೆ. ಈ ಅಧ್ಯಯನವು ೧) ರೈತ ಸಮುದಾಯಕ್ಕೆ ೨) ಸಿಬ್ಬಂದಿ ವರ್ಗದವರಿಗೆ ೩) ಸಮಾಜಕ್ಕೆ ೪) ಜ್ಞಾನ ಸಂಪತ್ತಿಗೆ ಯಾವ ರೀತಿ ಆರ್ಥಿಕ ಕೊಡುಗೆ ಕೊಡುತ್ತದೆ ಎಂದು ತಿಳಿಸಲಾಗುವುದು.

೧) ರೈತಾಪಿ ಸದಸ್ಯರಿಗೆ ಪ್ರಯೋಜನಗಳು :

೧) ಅಧ್ಯಯನದಿಂದ ರೈತರಿಗೆ ಸಹಕಾರಿ ಸಂಘದ ಆರ್ಥಿಕ ವ್ಯವಹಾರಗಳ ಮತ್ತು ನಿಯಮಗಳ ಬಗ್ಗೆ ಜಾಗೃತಿ ಮೂಡಿಸುತ್ತದೆ.

೨) ಅಧ್ಯಯನವು ರೈತಾಪಿ ಸದಸ್ಯರಿಗೆ ದೊರೆಯುವ ಪತ್ತಿನ ಸೌಲಭ್ಯ ಪ್ರಯೋಜನಗಳ ಬಗ್ಗೆ ತಿಳಿಸುತ್ತದೆ.

೩) ರೈತರಿಗೆ ಸದಸ್ಯರಿಗೆ ಬೇಕಾಗುವ ಒಕ್ಕಲುತನದ ಚಟುವಟಿಕೆಗಳಿಗೆ ಸುಧಾರಿತ ಅಧಿಕ ಇಳುವರಿ ಕೊಡುವ ಉತ್ತಮ ಬೀಜಗಳು, ಮತ್ತು ರಾಸಾಯನಿಕ ಗೊಬ್ಬರ ಮುಂತಾದವುಗಳನ್ನು ಯೋಗ್ಯ ದರದಲ್ಲಿ ಸಕಾಲದಲ್ಲಿ ದೊರೆಯುವಂತೆ ಮಾಡಲು ಈ ಅಧ್ಯಯನ ಪ್ರಾಮುಖ್ಯತೆ ಹೊಂದಿದೆ.

೪) ರೈತ ಸದಸ್ಯರಿಗೆ ಅಧಿಕ ಬಡ್ಡಿ ದರದಲ್ಲಿ ಸಾಹುಕಾರರಿಂದ ಜಮೀನುದಾರರಿಂದ ಸಾಲ ಪಡೆಯದಂತೆ ಜಾಗೃತಿ ಮೂಡಿಸುತ್ತದೆ.

೫) ರೈತ ಸದಸ್ಯರಿಗೆ ಸಕಾಲದಲ್ಲಿ ಸಾಲ ಪಡೆದು ಅನುಕೂಲ ಪರಿಸ್ಥಿತಿಯಲ್ಲಿ ಸಾಲ ಮರುಪಾವತಿ ಮಾಡಲು ತಿಳುವಳಿಕೆ ನೀಡುತ್ತದೆ.

೨) ಸಿಬ್ಬಂದಿ ವರ್ಗದವರಿಗೆ :

೧) ಸಿಬ್ಬಂದಿ ವರ್ಗದವರಿಗೆ ಪ್ರಾಮಾಣಿಕವಾಗಿ ಪಾರದರ್ಶಕವಾಗಿ ಪರಿಣಾಮಕಾರಿಯಾಗಿ ಕಾರ್ಯನಿರ್ವಹಣಾ ಪದ್ಧತಿಯನ್ನು ತಿಳಿಸುತ್ತದೆ.

೨) ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ತತ್ವಗಳನ್ನು ರೈತರಿಗೆ ತಿಳಿಸಲು ಅನುಕೂಲವಾಗಿದೆ.

೩) ಈ ಸಹಕಾರಿ ಸಂಘದ ನಿಯಮಗಳ ಅನುಸಾರ ಕಾರ್ಯನಿರ್ವಹಣೆಯ ಬಗ್ಗೆ ತಿಳುವಳಿಕೆ ನೀಡುತ್ತದೆ.

೪) ಗಣಕ ಯಂತ್ರದ ಸಹಾಯದಿಂದ ಕಾರ್ಯನಿರ್ವಹಣೆಯನ್ನು ಚುರುಕುಗೊಳಿಸಲು ತಿಳಿಸುತ್ತದೆ.

೫) ಸಿಬ್ಬಂದಿ ವರ್ಗ ಮತ್ತು ರೈತ ಸದಸ್ಯರಿಗೆ ಜವಾಬ್ದಾರಿಯನ್ನು ಮೂಡಿಸಿ ಆರ್ಥಿಕ ವ್ಯವಹಾರದ ಪ್ರಜ್ಞೆಯನ್ನು ಬೆಳೆಸುತ್ತದೆ.

೩) **ಸಮಾಜಕ್ಕೆ :**

೧) ಸಮಾಜದಲ್ಲಿ ಉತ್ತಮ ವಾತಾವರಣ ನಿರ್ಮಿಸುವ ಪ್ರಯತ್ನ ಮಾಡಲು ತಿಳಿಸುತ್ತದೆ.

೨) ನ್ಯಾಯಬದ್ಧವಾಗಿ ಸಮಾಜದ ಎಲ್ಲ ವರ್ಗದವರಿಗೆ ಪತ್ತಿನ ಸೌಲಭ್ಯ ಮತ್ತು ಪಡಿತರಗಳು ದೊರೆಯುವಂತೆ ಮಾಡಲು ತಿಳಿಸುತ್ತದೆ.

೪) **ಜ್ಞಾನ ಸಂಪತ್ತಿಗೆ :**

ಜ್ಞಾನ ಸಂಪತ್ತಿನ ಸಾಗರಕ್ಕೆ ಈ ಅಧ್ಯಯನವು ಒಂದು ಹನಿ ನೀರು ಸೇರಿಸಿದಂತೆ ವೃದ್ಧಿಸಲು ಸಹಕಾರಿಯಾಗಿದೆ.

### ೧.೩ ವಿಷಯ ವಸ್ತುವಿನ ವಿವರಣೆ :

'ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಕಾರ್ಯನಿರ್ವಹಣೆ' ಒಂದು ಆರ್ಥಿಕ ಅಭಿವೃದ್ಧಿಯ ಅಧ್ಯಯನ ಎಂಬ ವಿಷಯವನ್ನು ಅಧ್ಯಯನಕ್ಕಾಗಿ ತೆಗೆದುಕೊಳ್ಳಲಾಗಿದೆ.

ಕಲ್ಲೋಳಿಯು ಬೆಳಗಾವಿ ಜಿಲ್ಲೆಯ ಉತ್ತರ ಭಾಗಕ್ಕೆ ಬರುತ್ತದೆ. ಘಟಪ್ರಭಾ ನದಿಯ ಈಶಾನ್ಯ ಭಾಗದಲ್ಲಿದ್ದು, ಮುಧೋಳ, ರಾಮದುರ್ಗ, ಸವದತ್ತಿ, ಬೈಲಹೊಂಗಲ, ಹುಕ್ಕೇರಿ, ರಾಯಬಾಗ, ಬೆಳಗಾವಿ ಇದರ ಸುತ್ತಮುತ್ತಲಿನ ತಾಲೂಕುಗಳು ಇದು ಘಟಪ್ರಭಾ ನದಿಯಿಂದ ೧೦ ಕಿ.ಮೀ. ದೂರದಲ್ಲಿದೆ.

ಕಲ್ಲೋಳಿಯ ಪ್ರಥಮ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವಾಗಿದೆ. ಸಹಕಾರಿ ಸಂಘದ ಸ್ಥಾಪನೆ ೫.ಮೇ ೧೯೧೩ ರಂದು ಮಾಡಲಾಯಿತು. ೧೯೧೩ ರಿಂದ ೨೦೧೫ ವರೆಗೆ ವಹಿವಾಟಿನಲ್ಲಿ ಉತ್ತಮ ಆರ್ಥಿಕ ಪ್ರಗತಿ ಸಾಧಿಸುತ್ತ ಮುನ್ನಡೆಯುತ್ತಿದೆ.

ಈ ಸಹಕಾರಿ ಸಂಘ ಪ್ರಾರಂಭದಲ್ಲಿ ಚಿಕ್ಕ ಬಾಡಿಗೆಯ ಸಣ್ಣ ಕೊಠಡಿಯಲ್ಲಿ ಕಾರ್ಯವನ್ನು ಪ್ರಾರಂಭಿಸಿ ಸಹಕಾರಿಗಳ ಶ್ರಮದ ಫಲವಾಗಿ ೧೯೫೬ ರಲ್ಲಿ ಸಂಘ ತನ್ನ ಸ್ವಂತ ಗೋದಾಮ ಹೊಂದಿತು. ನಂತರ ೧೯೬೦-೬೨ ರಲ್ಲಿ ಸಂಘದ ಕಛೇರಿ ಸಲುವಾಗಿ ಎರಡು ಕಟ್ಟಡಗಳನ್ನು ನಿರ್ಮಿಸಲಾಯಿತು. ೧೯೭೫ ರಲ್ಲಿ ಸಂಘದ ಸಭೆಗಳನ್ನು ನಡೆಸಲು ಹೊಸ ಕಛೇರಿಯ ಕಟ್ಟಡ ನಿರ್ಮಿಸಲಾಯಿತು. ನಂತರ ಸಂಘದ ಸದಸ್ಯರು ಸಾಲದ ಸೌಲಭ್ಯಗಳನ್ನು ಪಡೆದು ಮತ್ತೆ ಪಡೆದ ಸಾಲವನ್ನೆಲ್ಲ ಮರುಪಾವತಿ ಮಾಡಿಕೊಂಡು ಜಿಲ್ಲಾ ಕೇಂದ್ರ ಸಹಕಾರಿಬ್ಯಾಂಕಿನ ಮೆಚ್ಚುಗೆ ಗಳಿಸಿತು. ೧೫-೦೮-೧೯೮೧ ರಂದು ವಜ್ರಮಹೋತ್ಸವ ಆಚರಿಸಿಕೊಂಡಿತು. ಅಲ್ಲದೇ

ಮಂಗಳವಾರ ದಿನಾಂಕ : ೧೮-೧೧-೨೦೧೪ ರಂದು ಶತಮಾನೋತ್ಸವದ ಸಂಭ್ರಮವನ್ನು ಆಚರಿಸಿಕೊಂಡಿತು.

ಈ ಸಹಕಾರಿ ಸಂಘದಲ್ಲಿ ರೈತಾಪಿ ಸದಸ್ಯರಿಗೆ ಹಂಚಲು ರಾಸಾಯನಿಕ ಗೊಬ್ಬರ, ಸಂಗ್ರಹಿಸಿಡಲು ದೊಡ್ಡ ಗೋದಾಮಗಳನ್ನು ಕಟ್ಟಿಸಲಾಗಿದೆ. ಸದಸ್ಯರಿಗೆ ಸಕಾಲದಲ್ಲಿ ಸಾಲದ ಸೌಲಭ್ಯಗಳನ್ನು ಪಡೆಯುವುದಕ್ಕಾಗಿ ಉತ್ತಮ ಸಿಬ್ಬಂದಿ ವರ್ಗ ಮತ್ತು ಕಾರ್ಯಾಲಯವಿದೆ. ಈ ಸಹಕಾರಿ ಸಂಘದಲ್ಲಿ ಯಾವುದೇ ಜಾತಿ, ಪಕ್ಷ, ಬಡವ ಮತ್ತು ಶ್ರೀಮಂತರೆನ್ನದೇ ಸಕಾಲದಲ್ಲಿ ಸಾಲ ಒದಗಿಸಲಾಗುತ್ತದೆ. ರೈತರಿಗೆ ಟ್ರ್ಯಾಕ್ಟರಗಳನ್ನು ವಿತರಿಸಲಾಗಿದೆ. ಈ ಓಂದೆ ಈ ಸಹಕಾರಿ ಸಂಘವು ರಿಯಾಯಿತಿ ದರದಲ್ಲಿ ಜವಳಿ ವ್ಯಾಪಾರವನ್ನು ಮಾಡುತ್ತಿತ್ತು. ಇದೇ ಆವರಣದಲ್ಲಿ ನ್ಯಾಯ ಬೆಲೆಯ ಅಂಗಡಿಯು ಇದೆ. ಇದು ನ್ಯಾಯ ಬೆಲೆಯ ಮೂಲಕ ಗ್ರಾಹಕರಿಗೆ ಆಹಾರಧಾನ್ಯ ಸೀಮೆ ಎಣ್ಣೆ ಸಕ್ಕರೆಯನ್ನು ವಿತರಿಸಲು ಉತ್ತಮ ಸಿಬ್ಬಂದಿಯನ್ನು ಹೊಂದಿದೆ.

**೧.೪ ಅಧ್ಯಯನದ ಉದ್ದೇಶಗಳು :**

ಪ್ರಸ್ತುತ ಈ ಅಧ್ಯಯನದಲ್ಲಿ ಮುಖ್ಯವಾಗಿ ಕೆಳಕಂಡ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗುವುದು.

೧) ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಬೆಳವಣಿಗೆಯನ್ನು ಅರಿಯುವುದು.

೨) ಅಧ್ಯಯನಕ್ಕೆ ಆಯ್ಕೆ ಮಾಡಿದ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಬೆಳವಣಿಗೆಯ ಹಿನ್ನೆಲೆಯನ್ನು ಚಿತ್ರಿಸುವುದು.

೩) ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಆರ್ಥಿಕ ಪ್ರಗತಿ ವಿಶ್ಲೇಷಣೆ ಮಾಡುವುದು.

೪) ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹಾಗೂ ಸಂಸ್ಥೆಯ ಪ್ರಗತಿಗೆ ಸಲಹೆಗಳನ್ನು ನೀಡುವುದು.

ಈ ಮೇಲಿನ ಎಲ್ಲ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಯಶಸ್ವಿಯಾಗಿ ಸಾಧಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ೧.೫ ಅಧ್ಯಯನದ ವಿಧಾನ :

ಸಂಶೋಧನಾ ಅಧ್ಯಯನಕ್ಕೆ ಪೂರಕವಾಗುವ ಬಹಳಷ್ಟು ಮಾಹಿತಿಯನ್ನು ಅನುಸಂಗಿಕ ವಿಧಾನದಿಂದ ಸಂಗ್ರಹಣೆ ಮಾಡಲಾಗಿದೆ. ಹಲವಾರು ಬಾರಿ ಸಂಘಕ್ಕೆ ಭೇಟ್ಟಿ ಕೊಟ್ಟು ಸಂದರ್ಶನದ ಮೂಲಕ ವಿಷಯವನ್ನು ಕಲೆ ಹಾಕಲಾಗಿದೆ. ಈ ಅಧ್ಯಯನಕ್ಕೆ ಬೇಕಾದ ಮಾಹಿತಿಯನ್ನು ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಕಛೇರಿಯಿಂದ ಪಡೆದುಕೊಳ್ಳಲಾಗಿದೆ. ಆಡಳಿತ ಮಂಡಳಿ ಮತ್ತು ಸಿಬ್ಬಂದಿಯವರು ಪ್ರಕಟಿಸಿದ ಅಥಾವೆ ಪತ್ರಿಕೆಯ ವರದಿ, ಅಪ್ರಕಟಿತವಾದ ಕಛೇರಿಯ ದಸ್ತಾವೇಜುಗಳ ಮೂಲದಿಂದ ಪಡೆದು ಮತ್ತು ಪಟ್ಟಣ ಪಂಚಾಯತಿ ಕಛೇರಿಯಿಂದ ಸಂಗ್ರಹಿಸಿದ ಮಾಹಿತಿ ಮತ್ತು ಸಂಕ್ಷಿಪ್ತ ವರದಿಯನ್ನು ಆಧರಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಕೆಲವು ಮಾಹಿತಿಯನ್ನು ಅಂತರ್ ಜಾಲ ಸಹಾಯದಿಂದ ಪಡೆದುಕೊಳ್ಳಲಾಗಿದೆ.

ಹೀಗೆ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಸಂಖ್ಯಾಶಾಸ್ತ್ರದ ಹಲವಾರು ಸಾಧನಗಳನ್ನು ಬಳಸಿ ವಿಶ್ಲೇಷಿಸಲಾಗಿದೆ. ಮಾಹಿತಿ ವಿಶ್ಲೇಷಣೆಗಾಗಿ ಕೆಲವು ಕೋಷ್ಟಕಗಳನ್ನು ರೇಖಾಚಿತ್ರಗಳಾದ ಸರಳ ಸ್ತಂಭ ಚಿತ್ರ, ಮತ್ತು ವೃತ್ತ ಖಂಡಾ ಚಿತ್ರಗಳನ್ನು ಆರ್ಥಿಕ ಅಭಿವೃದ್ಧಿಯನ್ನು ತೋರಿಸುವುದಕ್ಕಾಗಿ ಬಳಸಲಾಗಿದೆ. ಕೆಲವು ಬಾರಿ ಪ್ರತಿಶತ ಪ್ರಮಾಣ ಮತ್ತು ಪ್ರಗತಿ ದರ, ಕಂಡು ಹಿಡಿಯಲು ಅರ್ಥಶಾಸ್ತ್ರದ ಸೂತ್ರಗಳನ್ನು ಬಳಸಲಾಗಿದೆ.

ಹೀಗೆ ಸಮಗ್ರ ಅಧ್ಯಯನವು ಪ್ರಕಟಿತ ಮತ್ತು ಅಪ್ರಕಟಿತ ದಾಖಲೆಗಳಿಂದ, ಆಡಳಿತ ಮಂಡಳಿ ಹಾಗೂ ಸಿಬ್ಬಂದಿ ವರ್ಗದವರೊಂದಿಗೆ ಚರ್ಚಿಸುವ ಮೂಲಕ, ಅಂತರ್ಜಾಲದ ಸಂಪರ್ಕದಿಂದ ಪಡೆದ ಮಾಹಿತಿಗಳಿಂದ ವಿಶ್ಲೇಷಿಸಲಾಗಿದೆ.

## ೧.೬ : ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಈ ಅಧ್ಯಯನಕ್ಕೆ ಸಂಬಂಧಪಡುವ ಸಹಕಾರ ಇಲಾಖೆ ಅಡಿಯಲ್ಲಿ[೨] ಬರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ದಿನಾಂಕ ೩೧/೦೩/೨೦೧೪ ರ ಅಂತ್ಯಕ್ಕೆ ೫೨೩೬ ಗಳು ಕಾರ್ಯನಿರ್ವಹಿಸುತ್ತವೆ. ಇದರಲ್ಲಿ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ಒಂದಾಗಿದೆ. ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ರೈತ ಸದಸ್ಯರಿಗೆ ಸಕಾಲದಲ್ಲಿ ತ್ವರಿತ ಪತ್ತಿನ ಸೌಲಭ್ಯವನ್ನು ಒದಗಿಸುವ ಪ್ರಮುಖ ಉದ್ದೇಶವನ್ನು ಹೊಂದಿದೆ.

---

೨ : ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ ೧೯೫೯ ಮತ್ತು ನಿಯಮಗಳು ೧೯೯೬ : ಸಂ. ಎಸ್.ಎಸ್. ಹಾದಿಮನಿ. ವಿಜಯಶ್ರೀ ಪ್ರಕಾಶನ, ರತ್ನಗಿರಿ ಧಾರವಾಡ ೫೮೦೦೦೪, ಪುಟ ಸಂಖ್ಯೆ.೨೯.

ಸಹಕಾರ ಇಲಾಖೆಯು ತನ್ನ ಕಾರ್ಯನಿರ್ವಹಣೆಯ ಉದ್ದೇಶದಿಂದ ತನ್ನ ಇಲಾಖೆಯನ್ನು ನಾಲ್ಕು ಪ್ರಾಂತಗಳನ್ನಾಗಿ ವಿಂಗಡಿಸಲಾಗಿದೆ. ರಾಜ್ಯಮಟ್ಟದ ಕೇಂದ್ರ ಸ್ಥಾನದಲ್ಲಿ ಸಹಕಾರಿ ಸಂಘಗಳ ನಿಬಂಧಕರೆಂದು (ಭಾ.ಆ.ಸೇ.) ಅವರ ಅಧೀನದಲ್ಲಿ ಅಪರ ನಿಬಂಧಕರೆಂದು ಕಾರ್ಯನಿರ್ವಹಿಸುತ್ತಾರೆ. ಕರ್ನಾಟಕದಲ್ಲಿ ನಾಲ್ಕು ಸಹಕಾರ ಇಲಾಖೆ ಪ್ರಾಂತಗಳಿವೆ. ಒಂದು ಬೆಂಗಳೂರು ಸಹಕಾರಿ ಸಂಘಗಳ ಸಂಯುಕ್ತ ನಿಬಂಧಕರ ಪ್ರಾಂತ ಇದೆ. ಇದರಲ್ಲಿ ರಾಮನಗರ ಕೋಲಾರ, ಚಿಕ್ಕಮಗಳೂರು ಮುಂತಾದ ಜಿಲ್ಲೆಗಳು ಇದರ ವ್ಯಾಪ್ತಿಗೆ ಸೇರುತ್ತವೆ. ಎರಡನೆಯದು ಸಹಕಾರಿ ಸಂಘಗಳ ಸಂಯುಕ್ತ ನಿಬಂಧಕರು ಮೈಸೂರು ಇದಕ್ಕೆ ಚಾಮರಾಜ ನಗರ, ಮಂಡ್ಯ, ಹಾಸನ ಮುಂತಾದ ಜಿಲ್ಲೆಗಳು ಸೇರುತ್ತವೆ. ಮೂರನೆಯದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಳಗಾವಿ. ಬೆಳಗಾವಿ ಪ್ರಾಂತದಲ್ಲಿ ಧಾರವಾಡ, ಹಾವೇರಿ, ಕಾರವಾರ, ಗದಗ, ವಿಜಾಪೂರ, ಬಾಗಲಕೋಟ ಹೀಗೆ ಏಳು ಜಿಲ್ಲೆಗಳು ಇದರ ವ್ಯಾಪ್ತಿಗೆ ಬರುತ್ತವೆ. ನಾಲ್ಕನೆಯದು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಕಲಬುರ್ಗಿ ಈ ಪ್ರಾಂತಕ್ಕೆ ಬಳ್ಳಾರಿ, ಕೊಪ್ಪಳ, ರಾಯಚೂರು, ಯಾದಗಿರಿ ಮತ್ತು ಬೀದರ ಜಿಲ್ಲೆಗಳು ಇದರ ವ್ಯಾಪ್ತಿಗೆ ಬರುತ್ತವೆ.

ಸಹಕಾರ ಸಂಘಗಳ ಉಪನಿಬಂಧರು ಬೆಳಗಾವಿ ಈ ವಿಭಾಗದಲ್ಲಿ ೧) ಸಹಾಯಕ ನಿಬಂಧಕರು ಚಿಕ್ಕೋಡಿ ೨) ಸಹಾಯಕ ನಿಬಂಧಕರು ಬೈಲಹೊಂಗಲ ೩) ಸಹಾಯಕ ನಿಬಂಧಕರು ಬೆಳಗಾವಿ ಇದರ ವ್ಯಾಪ್ತಿಗೆ ಸೇರುತ್ತವೆ. ಸಹಾಯಕ ನಿಬಂಧಕರು ಬೈಲಹೊಂಗಲ ಈ ವಿಭಾಗದಲ್ಲಿ ೧) ಬೈಲಹೊಂಗಲ ೨) ಗೋಕಾಕ ೩) ಸವದತ್ತಿ ೪) ರಾಮದುರ್ಗ ತಾಲೂಕುಗಳು ಇದರ ವ್ಯಾಪ್ತಿಗೆ ಬರುತ್ತವೆ. ನಮ್ಮ ಈ ಪ್ರಸ್ತುತ ಅಧ್ಯಯನ ಗೋಕಾಕ ತಾಲೂಕಿನ (ಸಹಕಾರ ಅಭಿವೃದ್ಧಿ ಅಧಿಕಾರಿ ಕಛೇರಿ) ಲ್ಲಿ ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಕಾರ್ಯನಿರ್ವಹಿಸುತ್ತಿದೆ. ಈ ಪ್ರಸ್ತುತ ಅಧ್ಯಯನ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಕಾರ್ಯನಿರ್ವಹಣೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**೧.೭ : ಅಧ್ಯಯನದ ವಿನ್ಯಾಸ :**

ಅಧ್ಯಯನದಲ್ಲಿ ಒಳಗೊಂಡಿರುವ ಅಧ್ಯಾಯಗಳು :

ಈ ಸಂಶೋಧನೆಯನ್ನು ಪ್ರಮುಖವಾಗಿ ಐದು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ.

**ಅಧ್ಯಾಯ ಒಂದು :**

ಅಧ್ಯಾಯ ಒಂದರಲ್ಲಿ ಅಧ್ಯಯನ ಪ್ರವೇಶ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಮಹತ್ವ ವಿಷಯ ವಸ್ತುವಿನ ವಿವರ. ಉದ್ದೇಶಗಳು, ಅಧ್ಯಯನದ ವಿಧಾನ, ವ್ಯಾಪ್ತಿ ವಿನ್ಯಾಸ ಹಾಗೂ ನಿಬಂಧನೆ ಒಳಗೊಂಡಿದೆ.

**ಅಧ್ಯಾಯ ಎರಡು :**

ಈ ಅಧ್ಯಾಯದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಹುಟ್ಟು ಹಾಗೂ ವಿಕಾಸ, ಭಾರತದಲ್ಲಿ (ಸಹಕಾರಿ ಆಂದೋಲನ) ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಹುಟ್ಟು ಹಾಗೂ ವಿಕಾಸ, ಕರ್ನಾಟಕದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಹುಟ್ಟು ಮತ್ತು ಬೆಳವಣಿಗೆ, ವಿಭಾಗವಾರು ವಿವಿಧ ಸಹಕಾರ ಸಂಘಗಳ ವಿವರ, ಸಹಕಾರ ಇಲಾಖೆಯ ಶಾಸನಾತ್ಮಕ ಮತ್ತು ನ್ಯಾಯಾಂಗದ ಅಧಿನಿಯಮಗಳು, ಲೆಕ್ಕ ಪರಿಶೋಧನಾ ವರ್ಗೀಕರಣ ಪ್ರಕಾರ ಸಹಕಾರ ಸಂಘಗಳ ವಿವರಗಳನ್ನು ಒಳಗೊಂಡಿದೆ.

**ಅಧ್ಯಾಯ ಮೂರು :**

ಈ ಅಧ್ಯಾಯದಲ್ಲಿ ಕಲ್ಲೋಳಿ ಭೌಗೋಳಿಕ ಲಕ್ಷಣ (ಹಿನ್ನೆಲೆ), ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಉಗಮ ಮತ್ತು ವಿಕಾಸ, ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಆಡಳಿತ ರಚನೆ. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಆಡಳಿತ ಮಂಡಳಿಯ ಕರ್ತವ್ಯ ಮತ್ತು ಅಧಿಕಾರಗಳು, ಅಭಿವೃದ್ಧಿ (ಸೌಲಭ್ಯ) ಕಾರ್ಯಗಳನ್ನು ಒಳಗೊಂಡಿದೆ.

**ಅಧ್ಯಾಯ ನಾಲ್ಕು :**

ಈ ಅಧ್ಯಾಯದಲ್ಲಿ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಆರ್ಥಿಕ ಪ್ರಗತಿ ಪರಿಶೀಲನೆ, ಇದು ಐದು ವರ್ಷದ ಆರ್ಥಿಕ ವಿಶ್ಲೇಷಣೆಯನ್ನು ಒಳಗೊಂಡಿದೆ. ಸದಸ್ಯರ ಬೆಳವಣಿಗೆ ದರದ ವಿಶ್ಲೇಷಣೆ ಶೇರು ಬಂಡವಾಳ ಪ್ರಮಾಣದ ವಿಶ್ಲೇಷಣೆ ಪತ್ತಿನ ಬೆಳವಣಿಗೆ ದರದ ವಿಶ್ಲೇಷಣೆ ಆದಾಯ-ವೆಚ್ಚದ ಬೆಳವಣಿಗೆ ದರದ ವಿಶ್ಲೇಷಣೆ ಲಾಭದ ದರದ ವಿಶ್ಲೇಷಣೆಯನ್ನು ಒಳಗೊಂಡಿದೆ.

**ಅಧ್ಯಾಯ ಐದು :**

ಈ ಅಧ್ಯಾಯದಲ್ಲಿ ಅಧ್ಯಯನದ ಸಮಾರೋಪ, ಫಲಿತಗಳು ಹಾಗೂ ಸಲಹೆ ಸೂಚನೆಗಳನ್ನು ಒಳಗೊಂಡಿದೆ.

**ಅಧ್ಯಯನದ ನಿಬಂಧನೆಗಳು :**

ಈ ಅಧ್ಯಯನವು ಕೆಲವೊಂದು ನಿಬಂಧನೆಗಳ ಚೌಕಟ್ಟಿನಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ. ನಿಬಂಧನೆಗಳು ಸಂಶೋಧನಾ ಅಧ್ಯಯನದ ವ್ಯಾಪ್ತಿಯನ್ನು ನಿರ್ಧರಿಸುವ ಅಂಶಗಳಾಗಿವೆ.

೧) ಅಧ್ಯಾಯಕ್ಕಾಗಿ ಲಭಿಸುವ ಸಮಯ

೨) ಅಧ್ಯಯನದ ಅವಧಿ

೩) ಪತ್ತಿನ ಸೌಲಭ್ಯಗಳ ಬೆಳವಣಿಗೆ ದರ ಮಿತಿ

೪) ಪ್ರದೇಶದ ನಿಬಂಧನೆ

೫) ಸಿಬ್ಬಂದಿ ವರ್ಗ ಕಾರ್ಯನಿರ್ವಹಣೆ ಪರಿಶೀಲನೆ.

**೧.೮ ಅಧ್ಯಯನದ ನಿಬಂಧನೆ :**

೧) ಅಧ್ಯಯನಕ್ಕೆ ದೊರೆತ ಸಮಯದ ನಿಬಂಧನೆ : ಕನ್ನಡ ವಿಶ್ವವಿದ್ಯಾಲಯ ಹಂಪಿ ಎಂ.ಫಿಲ್. ಪರೀಕ್ಷೆಗಳ ಫಲಿತಾಂಶ ಪ್ರಕಟಿಸಿದ ಕೆಲವೇ ಅವಧಿಯಲ್ಲಿ ಸಂಶೋಧನೆ ನಿಬಂಧವನ್ನು ಮಂಡಿಸುವಂತೆ ನಿಗದಿ ಮಾಡಿದ್ದು, ಕಡಿಮೆ ಸಮಯದಲ್ಲಿ ನಿಬಂಧ ರಚಿಸಿ ಸುತ್ತೋಲೆಯನ್ನು ಹೊರಡಿಸಿತ್ತು ಆದರೆ ಇನ್ನೂ ಮೂರು ತಿಂಗಳ ಅವಧಿ ನೀಡಿದ್ದರೆ ಅನುಕೂಲವಾಗುತ್ತಿತ್ತು.

೨) ಅಧ್ಯಯನದ ಅವಧಿ : ಸಂಶೋಧನೆಗಾಗಿ ೨೦೧೦-೧೧, ೨೦೧೪-೧೫ ಅವಧಿಯಲ್ಲಿನ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಆರ್ಥಿಕ ಅಭಿವೃದ್ಧಿಯನ್ನು ಪರಿಶೀಲಿಸಲಾಗಿದೆ. ಈ ೫ ವರ್ಷದ ಅವಧಿಯಲ್ಲಿನ (ದತ್ತಾಂಶಗಳು) ಅಥಾವೆ ಪತ್ರಿಕೆಗಳ ಆಧಾರದ ಈ ನಿಬಂಧವನ್ನು ರಚಿಸಲಾಗಿದೆ.

೩) ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದಲ್ಲಿ ೨೦೧೦-೧೧ ರಿಂದ ೨೦೧೪-೧೫ ರ ವರೆಗೆ ಪತ್ತಿನ ವ್ಯವಹಾರ, ಲಾಭ-ಹಾನಿ, ಆರ್ಥಿಕ ವ್ಯವಹಾರಗಳಿಗೆ ಒಳಪಡಿಸಲಾಗಿರುತ್ತದೆ.

೪) ಈ ಅಧ್ಯಯನವು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಕಲ್ಲೋಳಿಯ ಕ್ಷೇತ್ರದಲ್ಲಿ ಬರುವ ಪ್ರದೇಶವನ್ನು ಆಧರಿಸಿ ಸಂಶೋಧನೆ ಮಾಡಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಈ ಸಂಘದ ಆರ್ಥಿಕ ಅಭಿವೃದ್ಧಿಯ ಬಗ್ಗೆ ತಿಳಿಸಲಾಗಿದೆ.

೫) ಈ ಅಧ್ಯಯನದ ಅವಧಿಯಲ್ಲಿ ೬ ಜನ ಕಾರ್ಯನಿರತ ಸಿಬ್ಬಂದಿಯ ಕಾರ್ಯನಿರ್ವಹಣೆಯನ್ನು ಮಾತ್ರ ಪರಿಗಣಿಸಲಾಗಿದೆ.

**ಉಪಸಂಹಾರ :**

ಈ ಅಧ್ಯಾಯವು ಇಡೀ ನಿಬಂಧದ ರೂಪರೇಷೆಗಳನ್ನು ಸಂಕ್ಷಿಪ್ತವಾಗಿ ಮತ್ತು ನಿಖರವಾಗಿ ಪ್ರಸ್ತುತಪಡಿಸುತ್ತದೆ. ಇದಕ್ಕೆ ಒಳಗೊಂಡಿರುವ ಅಧ್ಯಾಯಗಳ ವಿನ್ಯಾಸದ ಪ್ರಕಾರವೇ ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಈ ಸಹಕಾರಿ ಸಂಘಕ್ಕೆ ಸಂಬಂಧಿಸಿದ ವಿಷಯಗಳನ್ನು ಸವಿವರವಾಗಿ ಅಧ್ಯಯನ ಮಾಡಲಾಗಿದೆ. ಅಗತ್ಯವಿರುವಲ್ಲಿ ವಿಶ್ಲೇಷಣೆಗಳನ್ನು ಸಹ ನೀಡಲಾಗಿದೆ.

# ಅಧ್ಯಾಯ – ಎರಡು
## ಭಾರತದಲ್ಲಿ ಸಹಕಾರಿ ಸಂಘದ ಹುಟ್ಟು ಮತ್ತು ಬೆಳವಣಿಗೆ

೨.೧ : ಪ್ರಸ್ತಾವಣೆ.

೨.೨ : ಸಹಕಾರಿ ಸಂಘದ ಅರ್ಥ

೨.೩ : ಭಾರತದಲ್ಲಿ ಸಹಕಾರಿ ಸಂಘಗಳ ಹುಟ್ಟು ಮತ್ತು ವಿಕಾಸ

೨.೪ : ಕರ್ನಾಟಕದಲ್ಲಿ ಸಹಕಾರಿ ಸಂಘಗಳ ಉಗಮ ಮತ್ತು ವಿಕಾಸ

೨.೫ : ಸಹಕಾರ ಧ್ಯೇಯಗಳು.

೨.೬ : ವಿಭಾಗವಾರು ಸಹಕಾರಿ ಸಂಘಗಳು ಮತ್ತು ಅಂಕಿ ಅಂಶಗಳು

## ಅಧ್ಯಾಯ ಎರಡು

## ಭಾರತದಲ್ಲಿ ಸಹಕಾರಿ ಸಂಘದ ಹುಟ್ಟು ಮತ್ತು ಬೆಳವಣಿಗೆ

1. **ಪ್ರಸ್ತಾವನೆ** : ಈ ಅಧ್ಯಾಯದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಅರ್ಥ ಮತ್ತು ಭಾರತ ಹಾಗೂ ಕರ್ನಾಟಕದಲ್ಲಿ ಹುಟ್ಟು ಹಾಗೂ ಬೆಳವಣಿಗೆ ಹಾಗೂ ಸಹಕಾರ ಇಲಾಖೆಯ ಶಾಸನಾತ್ಮಕ ಮತ್ತು ನ್ಯಾಯಾಂಗದ ಅಧಿನಿಯಮಗಳನ್ನು ವಿವರಿಸಲಾಗುತ್ತಿದೆ.

2. **ಸಹಕಾರಿ ಸಂಘದ ಅರ್ಥ** :

ಸಹಕಾರ ಎಂಬ ಪದದ ಈ ವಿಶಿಷ್ಟ ಅರ್ಥವನ್ನು ಗ್ರಹಿಸುವುದೇ ಈ ಅಧ್ಯಾಯದ ಮುಖ್ಯ ಉದ್ದೇಶವಾಗಿದೆ. ವಿವಿಧ ಅರ್ಥಶಾಸ್ತ್ರಜ್ಞರು ಸಹಕಾರದ ಬಗೆಗೆ ವಿವರಣೆ ನೀಡುತ್ತಾರೆ.

**ಸಿ.ಆರ್.ಫೇ** ಅವರ ಪ್ರಕಾರ "ದುರ್ಬಲ ವರ್ಗದವರಿಂದ ಪ್ರಾರಂಭಿಸಲ್ಪಡುವ ಅವರು[೩] ಕೂಡಿ ವ್ಯವಹಾರ ಕೈಗೊಳ್ಳುವ ಉದ್ದೇಶದಿಂದ ಸ್ಥಾಪಿಸಲಾಗುವ ಯಾವಾಗಲೂ ನಿಸ್ವಾರ್ಥ ಭಾವನೆಯಿಂದ ಕಾರ್ಯನಿರ್ವಹಿಸುವ ಸದಸ್ಯತ್ವದ ವಹಿಸಲು ಸಿದ್ಧವಿರುವವರೆಲ್ಲರಿಗೂ ಅವರು ಸಂಸ್ಥೆಯನ್ನು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಳ್ಳುವರೋ ಅಷ್ಟು ಪ್ರಮಾಣದಲ್ಲಿ ಪ್ರತಿಫಲ ದೊರಕಿಸುವ ಷರತ್ತುಗಳಿರುವ ಸಂಘವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ಎಂದು ಹೇಳಬಹುದು" ಅಂದರೆ ಆರ್ಥಿಕವಾಗಿ ದುರ್ಬಲ ವರ್ಗದವರನ್ನು ಆರ್ಥಿಕವಾಗಿ ಬಲಿಷ್ಠರನ್ನಾಗಿ ಮಾಡುವುದೇ ಈ ಸಹಕಾರಿ ಸಂಘಗಳ ಉದ್ದೇಶವಾಗಿದೆ.

**ಸಿ.ಎಫ್.** ಸ್ಟ್ರಿಕ್‌ಲೆಂಡ್ ಅವರ ಪ್ರಕಾರ "ಸಾಮಾನ್ಯ ಆರ್ಥಿಕ ಗುರಿ ಅಥವಾ ಉದ್ದೇಶಗಳನ್ನು ಪ್ರಾಮಾಣಿಕ ಮಾರ್ಗಗಳ ಮೂಲಕ ಸಾಧಿಸಲು ವ್ಯಕ್ತಿಗಳು ಏರ್ಪಡಿಸಿಕೊಳ್ಳುವ ಸಂಘವನ್ನು ಸಹಕಾರ ಸಂಘ ಎಂದು ಕರೆಯುವರು".

**ಎಂ.ಟಿ.** ಹೆರ್ರಿಕ್ ಅವರ ಪ್ರಕಾರ "ವ್ಯಕ್ತಿಗಳು ಸ್ವಯಂ ಪ್ರೇರಣೆಯಿಂದ ಒಗ್ಗಟ್ಟಾಗಿ ತಮ್ಮೊಳಗೆ ಪರಸ್ಪರ ಏರ್ಪಾಡು ಮಾಡಿಕೊಂಡು ತಮ್ಮಲ್ಲಿರುವ ಶಕ್ತಿಗಳನ್ನು ಸಾಧನಗಳನ್ನು ಒಟ್ಟಿನಲ್ಲಿ ತಮಗೆ ಲಾಭ ಬರುವಂತಹ ಸೇವೆಯೇ ಪ್ರಕ್ರಿಯೇ ಸಹಕಾರವಾಗಿದೆ".

---

೩. ಸಹಕಾರ ತತ್ವಗಳು ಹಾಗೂ ಸಮಸ್ಯಗಳು : ಎ.ಪಿ.ಶ್ರೀನಿವಾಸಮೂರ್ತಿ ಕನ್ನಡ ಅಧ್ಯಯನ ಸಂಸ್ಥೆ ಮೈಸುರು ವಿಶ್ವವಿದ್ಯಾನಿಲಯ ಪು: ೧೧೭, ೧೧೮.

**ಎಚ್ ಕ್ಯಾಲ್‌ವರ್ಟ್** ಅವರ ಹೇಳಿಕೆಯಂತೆ "ವ್ಯಕ್ತಿಗಳು ಸಮಾನತೆಯ ಆಧಾರದ ಮೇಲೆ ತಮ್ಮದೇ ಆದ ಆರ್ಥಿಕ ಹಿತಾಶಕ್ತಿಗಳ ಸಾಧನೆಗಾಗಿ, ಸ್ವಯಂ ಪ್ರೇರಿತವಾಗಿ ರೈತರು ಸಂಘಟಿತರಾಗುವ ವ್ಯವಹಾರದ ರೂಪವನ್ನು ಸಹಕಾರ ಸಂಘ" ಎನ್ನಲಾಗುತ್ತದೆ.

ಅಂದರೆ ರೈತರ ತಮ್ಮ ಆರ್ಥಿಕ ಹಿತಾಸಕ್ತಿಗಳನ್ನು ಪ್ರಾಮಾಣಿಕ ಮಾರ್ಗಗಳ ಮೂಲಕ ಸಾಧಿಸಿಕೊಳ್ಳಲು ಒಬ್ಬ ವ್ಯಕ್ತಿಯು (ರೈತ) ಸ್ವಯಂ ಪ್ರೇರಿತನಾಗಿ ಇತರರೊಡನೆ ಸಮಾನತೆಯ ಆಧಾರದ ಮೇಲೆ ಕೂಡಿಕೊಳ್ಳುವ ಒಂದು ಆರ್ಥಿಕ ವ್ಯವಹಾರಿಕ ವ್ಯವಸ್ಥೆಯೇ ಸಹಕಾರಿ ಸಂಘ ಎನ್ನುವರು.

ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ಬಿತ್ತನೆಯ ಕಾಲದಲ್ಲಿ ಉತ್ತಮ ಅಧಿಕ ಇಳುವರಿ ಕೊಡುವ ಬೀಜಗಳನ್ನು ಪೂರೈಸುವುದು. ಕೃಷಿ ಸಲಕರಣೆಗಳನ್ನು ಪತ್ತಿನ ಸೌಲಭ್ಯ ಪೂರೈಯಿಸುವುದು ಕರ್ತವ್ಯವಾಗಿರುತ್ತದೆ. ಸಂಘಕ್ಕೆ ಒಂದು ನಿಕಟ ಸಂಬಂಧವಿದೆ.

## ೨.೩ ಭಾರತದಲ್ಲಿ ಸಹಕಾರಿ ಸಂಘಗಳ ಹುಟ್ಟು ಮತ್ತು ವಿಕಾಸ :

ಭಾರತ ಗ್ರಾಮೀಣ ಪ್ರದೇಶಗಳಿಂದ ಕೂಡಿದ ಕೃಷಿ ಪ್ರಧಾನ ರಾಷ್ಟ್ರ. ಸುಮಾರು[೪] ಇಂದಿಗೂ ಭಾರತದಲ್ಲಿ ಶೇಕಡಾ ೬೫% ರಷ್ಟು ಜನರು ಕೃಷಿಯನ್ನೇ ಅವಲಂಬಿಸಿದ್ದಾರೆ. ಆದರೆ ಕೃಷಿಯನ್ನೇ ಅವಲಂಬಿಸಿದ ರೈತರ ಬದುಕು ಮಾತ್ರ ಶೋಚನೀಯವಾಗಿದೆ. ಭಾರತದ ರೈತರ ಸಮಸ್ಯೆಗಳ ನಿವಾರಣೆಗೆ ಸಹಕಾರವೇ ಪ್ರಮುಖವಾದ ಸಾಧನವೆಂದು ಮಾಜಿ ಪ್ರಧಾನಿ ದಿ.ಪಂಡಿತ ಜವಾಹರಲಾಲ್ ನೆಹರು ಅಭಿಪ್ರಾಯಪಟ್ಟಿದ್ದರು. ಇತರ ದೇಶಗಳಿಲ್ಲದ್ದಂತೆಯೇ ಭಾರತದಲ್ಲಿಯೂ ರೈತರು ದುಃಖ ಪೀಡಿತ ಮತ್ತು ಕಷ್ಟಗಳ ನಿವಾರಣೆಗಾಗಿ ಸಹಕಾರ ಚಳುವಳಿ ಪ್ರಾರಂಭವಾಯಿತು.

ಇಂಗ್ಲೆಂಡಿನ ಕೈಗಾರಿಕಾ ಕ್ರಾಂತಿ ಮತ್ತು ಬ್ರಿಟಿಷರ ಆಳ್ವಿಕೆ ಮುಂತಾದವುಗಳು ಭಾರತದ ಆರ್ಥಿಕ ಜೀವನದ ಮೇಲೆ ದುಷ್ಪರಿಣಾಮ ಬೀರಿದವು. ಅಂದರೆ ಭಾರತದ ಆರ್ಥಿಕ ಸ್ಥಿತಿ ಹದಗೆಟ್ಟಿತು. ಭಾರತೀಯ ರೈತರ ಪ್ರಾಚೀನ ಸಂಪ್ರದಾಯ ಕೃಷಿ ಪದ್ಧತಿಯಿಂದ ಮತ್ತು ಪದೇ ಪದೇ ಕ್ಷಾಮಗಳು ತೆರೆದಿರುವುದರಿಂದ ರೈತರ ಆರ್ಥಿಕ ಬದುಕಿನಲ್ಲಿ ಸುಧಾರಣೆ ಕಂಡು ಬರಲಿಲ್ಲ. ಹಾಗೂ ರೈತರು ಸಾಮಾಜಿಕ ಸಂಪ್ರದಾಯ ಕಟ್ಟು ಪಾಡುಗಳಿಗೆ ಧನಿಕರಿಂದ ಅಧಿಕ ಬಡ್ಡಿದರ ತೆತ್ತು ಸಾಲ ಪಡೆದು ರೈತರು ಸಾಮಾಜಿಕ ಋಣಭಾರವನ್ನು ತೀರಿಸುವದರಿಂದ ಧನಿಕ

---

೪. ಸಹಕಾರ ಪರಿಚಯ : ಎಚ್.ಜಯದೇವ ಕನ್ನಡ ಸಾಹಿತ್ಯ ಪರಿಷತ್ತು ಪಂಪಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು-೧೮ ಪು: ೮, ೯,

ಸಾಲಗಾರ ಆರ್ಥಿಕ ಹಿಡತಕ್ಕೆ ರೈತರು ಒಳಗಾದರು. ಇದರಿಂದ ರೈತರ ಬದುಕು ಶೋಚನೀಯವಾಯಿತು.

೧೮೭೯ ರ ದಖನ್ ಕೃಷಿಕರ ಪರಿಹಾರ ಮಸೂದೆ ೧೮೮೩ ರ.ಭೂ ಅಭಿವೃದ್ಧಿ ಸಾಲ ಮಸೂದೆ ಹಾಗೂ ೧೮೮೪ ರ ಕೃಷಿಕರ ಸಾಲ ಮಸೂದೆ ಮುಂತಾದ ಕಾನೂನಗಳ ಮೂಲಕ ಸರ್ಕಾರ ರೈತರಿಗೆ ಸಾಲ ಒದಗಿಸುವ ಪ್ರಯತ್ನ ಮಾಡಿತು. ಆದರೆ ಇವು ಯಶಸ್ವಿಯಾಗಲಿಲ್ಲ. ಕೊನೆಗೆ ಸರ್ಕಾರ ರೈತರಿಗೆ ತಕ್ಕಾವಿ ಸಾಲಗಳ ಕಾರ್ಯಕ್ರಮವನ್ನು ಹಾಕಿಕೊಂಡಿತು ಆದರೆ ಅದು ಫಲ ನೀಡಲಿಲ್ಲ.

೧೮೯೧ ರಲ್ಲಿ ಪಂಜಾಬನಲ್ಲಿ ಸ್ವತಂತ್ರವಾದ ಒಂದು ಸಹಕಾರ ಸಂಸ್ಥೆ, ೧೮೯೪ ರಲ್ಲಿ ಮೈಸೂರಲ್ಲಿ ಸ್ಥಾಪಿತವಾದ ವ್ಯವಸಾಯ ಬ್ಯಾಂಕುಗಳು, ಚನ್ನೈಯಲ್ಲಿ ಚೀಟಿ ನಿಧಿ ಪದ್ಧತಿ ಇವೆಲ್ಲವುಗಳು ಒಂದು ರೀತಿಯ ಭಾರತದಲ್ಲಿ ಸಹಕಾರಿ ಪ್ರಯತ್ನಗಳಾಗಿವೆ. ಮದ್ರಾಸದ (ಈಗಿನ ತಮಿಳುನಾಡು) ಸರಕಾರ ಯುರೋಪಿನಲ್ಲಿ ಬೆಳೆಯುತ್ತಿದ್ದ ಸಹಕಾರ ಸಂಘಗಳ ನೀತಿ ನಿಯಮಗಳ ಬಗ್ಗೆ ಅಧ್ಯಯನ ಮಾಡಿ ವರದಿ ನೀಡಲು ಸರ್ ಪ್ರೆಢರಿಕ್ ನಿಕಲ್ಸನ್‌ರನ್ನು ನೇಮಿಸಿ ಯುರೋಪಿಗೆ ಕಳಿಸಿತು ಆಗ ನಿಕ್ಸಲನ್‌ರಿಗೆ ಜರ್ಮನ್ ದೇಶದಲ್ಲಿರುವ ರೈಫಿಸಾನ್ ಸಹಕಾರ ಸಂಘಗಳ ನೀತಿ ನಿಯಮಗಳು ಮತ್ತು ಕಾರ್ಯನಿರ್ವಹಣೆ ಸರಿಕಂಡವು. ಇಂತಹ ಸಹಕಾರ ಸಂಘಗಳನ್ನು ಭಾರತದಲ್ಲಿ ಸ್ಥಾಪಿಸಿದರೆ ರೈತರ ಬದುಕಿಗೆ ಆಧಾರವಾಗಿ ಫಲಪ್ರದವಾಗುತ್ತವೆ. ಎಂದು ೧೮೮೫ ತಮಿಳುನಾಡು ಸರಕಾರಕ್ಕೆ ವರದಿ ಸಲ್ಲಿಸಿದರು. ಇದರಿಂದ ಭಾರತ ದೇಶದಲ್ಲಿ ಸಹಕಾರ ಚಳುವಳಿ ಪ್ರಾರಂಭವಾಯಿತು.

ಹೀಗೆ ಹಲವು ವರ್ಷಗಳ ನಂತರ ೧೮೯೯ ತಮಿಳುನಾಡು ಸರಕಾರ ನಿಕಲ್ಸರ ವರದಿಯ ಪರಿಶೀಲಿಸಿತು. ನಂತರ ರೆಫಿಸಾನ್ ಮಾದರಿಯ ಸಹಕಾರ ಸಂಘಗಳನ್ನು ಭಾರತ ದೇಶದ ತುಂಬೆಲ್ಲ ಸ್ಥಾಪಿಸಬೇಕೆಂದು ೧೯೦೧ ರಲ್ಲಿ ರಚಿತವಾದ ಕ್ಷಾಮ ಸಮೀತಿಯಲ್ಲಿ ಸಲಹೆಯನ್ನು ನೀಡಿತು.

೧೯೦೪ ರ ಮಾರ್ಚ ೨೫ ರಂದು ಸಹಕಾರ ಸಂಘಗಳ ಪತ್ತಿನ ಕಾನೂನು ಭಾರತದಲ್ಲಿ ಜಾರಿಗೆ ಬಂದಿತು. ಆಗ ನೈಜವಾದ ಸಹಕಾರ ಚಳುವಳಿ ಭಾರತದಲ್ಲಿ ಪ್ರಾರಂಭವಾಯಿತು. ಈ ಕಾನೂನಿನ ಪ್ರಕಾರ ಪ್ರತಿಯೊಂದು ಪ್ರಾಂತಕ್ಕೂ ಸಹಕಾರ ಸಂಘಗಳ ಮುಖ್ಯಾಧಿಕಾರಿಯೊಬ್ಬರು (ರಜಿಸ್ಟ್ರಾರ್) ನೇಮಿಸಲಾಯಿತು. ಈ ಮುಖದ್ಯಾಧಿಕಾರಿಗಳು ತಮ್ಮ ಇಲಾಖೆಯ ಸಿಬ್ಬಂದಿಯ ಮತ್ತು ರೈತರ ಸಹಕಾರ ಮೂಲಕ ಸಹಕಾರ ಸಂಘಗಳ ಸ್ಥಾಪನೆಯ ಕಾರ್ಯವನ್ನು ನಿರ್ವಹಿಸಲಾರಂಭಿಸಿದರು. ಯಾವುದೇ ಒಂದು ನಿರ್ದಿಷ್ಟ ಸ್ಥಳ ಹತ್ತು ಜನರು

(ರೈತರು) ಸೇರಿ ಒಂದು ಸಹಕಾರ ಸಂಘ ಸ್ಥಾಪಿಸಲು ಅವಕಾಶ ಕಲ್ಪಿಸಲಾಯಿತು. ಈ ಸಹಕಾರ ಸಂಘಗಳೆಲ್ಲವೂ ರಜಿಸ್ಟ್ರಾರ್ ಅವರ ಮೇಲ್ವಿಚಾರಣೆ ಹಾಗೂ ಲೆಕ್ಕಪರಿಶೀಲನೆಗೆ ಒಳಗಾಗುತ್ತಿದ್ದವು. ಸ್ಟ್ಯಾಂಪು ಮತ್ತು ಮತ್ತು ಕೋರ್ಟ ಫೀ ರಜಿಸ್ಟ್ರೇಶನ್ ರುಸುಮ ಮುಂತಾದ ಕೆಲವು ವೆಚ್ಚಗಳಲ್ಲದೇ ವ್ಯವಹಾರದ ರಿಯಾಯಿತಿ ಇಂತಹ ಸಂಘಗಳಿಗೆ ನೀಡಲ್ಪಟ್ಟವು. ಹೀಗೆ ಭಾರತ ಸರಕಾರ ಸಂಘಗಳ ಸ್ಥಾಪನೆಯನ್ನು ಕ್ರಮಬದ್ಧಗೊಳಿಸಿತು. ಹೀಗೆ ಸಹಕಾರ ಚಳುವಳಿಯ ಪ್ರತಿಫಲವಾಗಿ ೧೯೧೨ ರಲ್ಲಿ ಭಾರತದಲ್ಲಿ ಒಟ್ಟು ನಾಲ್ಕು (೪) ಲಕ್ಷ ರೈತ ಸದಸ್ಯರುಗಳ ಸುಮಾರು ೩.೩೬ ಕೋಟಿ ರೂಪಾಯಿ ಬಂಡವಾಳ ಹೊಂದಿದ್ದ ೮೧೭೭ ಸಹಕಾರಿ ಸಂಘಗಳಿದ್ದವು. ಸಹಕಾರಿ ಆಂದೋಲನ ಪರಿಣಾಮವಾಗಿ ಗದಗ ಜಿಲ್ಲೆಯ ಕಣಗಿನ ಹಾಳ ಗ್ರಾಮದಲ್ಲಿ ೧೯೦೫ ರಲ್ಲಿ ಶ್ರೀ ಸಿದ್ದನಗೌಡ ಪಾಟೀಲ ಅವರಿಂದ ಸ್ಥಾಪಿತವಾದ ಪ್ರಾಥಮಿಕ ವ್ಯವಸಾಯ ಪತ್ತಿನ ಸಹಕಾರಿ ಸಂಘವು ಭಾರತದ ರೈತಾಪಿ ವರ್ಗದ ಸಹಕಾರಿ ಕ್ಷೇತ್ರದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವ ಸಂಗತಿಯಾಗಿದೆ. ಆದ್ದರಿಂದ ಶ್ರೀ ಸಿದ್ದನಗೌಡ ಪಾಟೀಲ ಅವರನ್ನು ಭಾರತದ ಸಹಕಾರಿ ಪಿತಾಮಹ ಎನ್ನಬಹುದಾಗಿದೆ.

**೧೯೧೪ ಮೆಗಲಾನ್ ಸಮೀತಿ :**

ಸಹಕಾರಿ ಚಳುವಳಿ ಪ್ರಾರಂಭವಾದ ಒಂದು ದಶಕದ ನಂತರ ಭಾರತದಲ್ಲಿ ಸಹಕಾರ ಪ್ರಗತಿಯ ಕುರಿತು ಪರಿಶೀಲಿಸಿ ವರದಿ ನೀಡಲು ಭಾರತದಲ್ಲಿ ಸರಕಾರವು ೧೯೧೪ ರ ಅಕ್ಟೋಬರ್‌ದಲ್ಲಿ ಮ್ಯಾಕ್ಲಾನ್ ಅವರ ನೇತೃತ್ವದಲ್ಲಿ ಒಂದು ಸಮೀತಿಯನ್ನು ನೇಮಿಸಿತು. ಈ ಸಮೀತಿಯ ಸಹಕಾರ ಸಂಘಗಳನ್ನು ಆರ್ಥಿಕ ಸಬಲಗೊಳಿಸಲು ರೈತಾಪಿ ವರ್ಗಕ್ಕೆ ಆಧಾರವಾಗಲು ಕೆಲವು ನಿಯಮಗಳನ್ನು ಹಾಕಿಕೊಟ್ಟಿತು. ಅಂದರೆ ಈ ಸಹಕಾರಿ ಸಂಘಗಳನ್ನು ನಾಲ್ಕು ಪ್ರಕಾರವಾಗಿ ೧) ಪ್ರಾಥಮಿಕ ಸಹಕಾರ ಸಂಘಗಳ ೨) ಕೇಂದ್ರ ಸಹಕಾರಿ ಬ್ಯಾಂಕುಗಳ ೩) ಪ್ರಾಂತೀಯ ಸಹಕಾರ ಬ್ಯಾಂಕುಗಳ ೪) ಮೇಲ್ವಿಚಾರಣಾ ಸಂಘಗಳೆಂದು ವಿಂಗಡಿಸಿತು. ಎಲ್ಲಾ ಪ್ರಾಥಮಿಕ ಸಹಕಾರ ಸಂಘಗಳು ಮಧ್ಯವರ್ತಿ ಕೇಂದ್ರ ಸಹಕಾರ ಬ್ಯಾಂಕಿನ ಸದಸ್ಯತ್ವ ಪಡೆದು ಅಲ್ಲಿಂದಲೇ ಸಾಲ ಪಡೆಯಬೇಕೆಂದು ಹಾಗೂ ಎಲ್ಲಾ ಮಧ್ಯವರ್ತಿ ಕೇಂದ್ರ ಸಹಕಾರಿ ಬ್ಯಾಂಕುಗಳು ಪ್ರಾಂತೀಯ ಅಪೆಕ್ಸ್ ಬ್ಯಾಂಕಿನ ಸದಸ್ಯತ್ವ ಪಡೆದು ಅಲ್ಲಿಂದಲೇ ಸಾಲಪಡೆಯಬೇಕೆಂದು ಈ ಸಮೀತಿ ಶಿಫಾರಸ್ಸು ಮಾಡಿತು. ಇಂದಿಗೂ ಸಹ ಈ ಸಮೀತಿಯ ಶಿಫಾರಸ್ಸುಗಳ ಪ್ರಕಾರ ಭಾರತದ ಸಹಕಾರ ವ್ಯವಸ್ಥೆ ಕಾರ್ಯನಿರ್ವಹಿಸುತ್ತಿದೆ ಇದರಿಂದ ಪ್ರಾಥಮಿಕ ಸಹಕಾರ ಸಂಘಗಳ ಬೆಳವಣಿಗೆ ಮತ್ತಷ್ಟು ಪ್ರೇರಣೆ ಸಿಕ್ಕಿತು.

## ೧೯೧೯ ರ ಮಾಂಟೆಗೋ ಚೆಲಮಸಪರ್ಡ :

ಕ್ರಿ.ಶ. ೧೯೧೯ ರ ಮಾಂಟೆಗೋ ಚೆಲಮಸಪರ್ಡ ಸುಧಾರಣೆಗಳ ಫಲವಾಗಿ ಜಾರಿಗೆ ತಂದ ಭಾರತ ಸರಕಾರದ ಕಾನೂನಿನ ಪ್ರಕಾರ ಸಹಕಾರ ಕ್ಷೇತ್ರವು ಪ್ರಾಂತೀಯ ಸರಕಾರದ ವ್ಯಾಪ್ತಿಗೆ ಒಳಪಟ್ಟ ವಿಷಯವಾಗಿ ವರ್ಗಾವಣೆಯಾಯಿತು. ಇದರಿಂದ ಈ ಸಹಕಾರ ಸಂಘಗಳ ಕಾನೂನು ರಚನೆ, ಸಹಕಾರ ಸಂಘಗಳ ಬೆಳವಣಿಗೆಲ್ಲವೂ ಪ್ರಾಂತೀಯ ಸರಕಾರದ ಅಧಿಕಾರಕ್ಕೆ ಸೇರಿದವು. ಅಂದರೆ ಪ್ರಾಂತೀಯ ಸರಕಾರಗಳು ಸಹಕಾರ ಕ್ಷೇತ್ರದ ಸಂಪೂರ್ಣ ಸಾರ್ವಭೌಮತ್ವವನ್ನು ಪಡೆದವು. ಇದರಿಂದ ಸಹಕಾರ ಕ್ಷೇತ್ರವನ್ನು ಬಲಪಡಿಸಲು ಮತ್ತು ಗ್ರಾಮೀಣ ರೈತಾಪಿ ವರ್ಗವನ್ನು ಧನಿಕರಿಂದ ಹಾಗೂ ಅಧಿಕ ಬಡ್ಡಿಯ ಲೇವಾದೇವಿಗಾರರಿಂದ ಋಣಮುಕ್ತ ಮಾಡಲು ಸಾಧ್ಯವಾಯಿತು. ಇದರಿಂದ ತಮಿಳುನಾಡು ಸರಕಾರ ಹಾಗೂ ಬಾಂಬೆ ಸರಕಾರಗಳು ಈ ಸಹಕಾರ ಬೆಳವಣಿಗೆ ಹೆಚ್ಚು ಪ್ರೋತ್ಸಾಹ ಮತ್ತು ಉತ್ತೇಜನ ನೀಡಿದವು ಇದರಿಂದ ಸಹಕಾರ ಕ್ಷೇತ್ರದ ಬಗ್ಗೆ ಜನರ ಆಸಕ್ತಿ ಹೆಚ್ಚಾಯಿತು.

ನಂತರ ಸಹಕಾರ ಕ್ಷೇತ್ರ ಪ್ರಗತಿಗೆ ಅನುಕೂಲವಾಗುವಂತಹ ಕಾನೂನುಗಳನ್ನು ಜಾರಿಗೆ ತಂದವು. ಹಾಗೂ ಶಾಸನಗಳನ್ನು ರಚಿಸಿಕೊಂಡು ಸಹಕಾರ ಸಂಘದಿಂದ ರೈತಾಪಿ ವರ್ಗಕ್ಕೆ ವಿವಿಧ ಸೌಲಭ್ಯಗಳನ್ನು ಒದಗಿಸಲು ಅನುಕೂಲವಾಯಿತು. ಹಲವು ವರ್ಷಗಳು ಗತಿಸಿದಂತೆ ೧೯೨೯ ರಿಂದ ೧೯೩೨ ರ ವರೆಗೆ ಉಂಟಾದ ಜಾಗತಿಕ ಮಹಾ ಆರ್ಥಿಕ ಮುಗ್ಗಟ್ಟಿನ ದುಷ್ಪರಿಣಾಮಗಳಿಂದ ಭಾರತದ ಸಹಕಾರ ಕ್ಷೇತ್ರಕ್ಕೆ ಭಾರಿ ಪೆಟ್ಟು ಬಿದ್ದು ಆಹಾರೋತ್ಪನ್ನಗಳು ಕೊರತೆಯುಂಟಾಗಿ ಆರ್ಥಿಕ ವಲಯದಲ್ಲಿ ಸರಕುಗಳ ಬೆಲೆಗಳು ಗಗನಕ್ಕೆ ಏರಿದವು. ಇದರಿಂದ ರೈತರ ಬದುಕು ದುಸ್ತರವಾಯಿತು. ಈ ಮಹಾ ಮುಗ್ಗಟ್ಟಿನ ಪರಿಣಾಮದಿಂದ ರೈತರ ಕೈಗಳು ಹಣದಿಂದ ಖಾಲಿಯಾಗಿ ಈ ಸಹಕಾರ ಸಂಘಗಳ ಠೇವಣಿಗಳು ಮತ್ತು ಶೇರು ಹಣ ಕಡಿಮೆಯಾಯಿತು. ಈ ಅವಧಿಯಲ್ಲಿ ಕೆಲವು ಆರ್ಥಿಕ ದೃಷ್ಟಿಯಿಂದ ದುರ್ಬಲವಾಗಿ ಸಹಕಾರ ಸಂಘಗಳು ಅವನತಿ ಹಾದಿ ಹಿಡಿದವು. ಈ ಕೆಟ್ಟ ಪರಿಸ್ಥಿತಿಯಿಂದಾಗಿ ಸಹಕಾರಿ ಕ್ಷೇತ್ರ ನಿದ್ರಾವಸ್ಥೆಗೆ ಜಾರಿ ಹೋಯಿತು. ಹಳಿದುಳಿದ ಸಹಕಾರಿ ಸಂಘಗಳನ್ನು ಬಲಪಡಿಸಲು ಪ್ರಾಂತೀಯ ಸರಕಾರಗಳು ಭಾರತದಲ್ಲಿ ಹೆಣಗಾಡಬೇಕಾಯಿತು.

೧೯೨೯–೧೯೩೨ ರಲ್ಲಿ ಆರಂಭವಾದ ಜಾಗತಿಕ ಮುಗಟ್ಟಿನಿಂದ ಸಹಕಾರಿ ಸಂಘಗಳು ನೀಡಿದ ಸಾಲಗಳು ಮರುಪಾವತಿಯಾಗಲಿಲ್ಲ. ಕಾರಣ ಸಹಕಾರಿ ಸಂಘಗಳು ತಮ್ಮ ಕಾರ್ಯನಿರ್ವಹಣ ಮಾಡಲು ಕಷ್ಟವಾಯಿತು. ಸರಕಾರ ಈ ದುಸ್ಥಿತಿಯನ್ನು ನಿವಾರಣೆ ಪುನರುಜ್ಜೀವನಗೊಳಿಸಲು ಪ್ರಾಂತೀಯ ದೇಶಿಯ ಸಂಸ್ಥಾನಗಳ ಸಹಕಾರಿ ಆಂದೋಲನವನ್ನು

ಸ್ಥಿತಿಗತಿಗಳನ್ನು ಕೂಲಂಕುಶವಾಗಿ ಪರಿಶೀಲಿಸಲು ಆಯಾ ಸರಕಾರಗಳು ತಜ್ಞರ ಸಮೀತಿಯನ್ನು ರಚಿಸಿ ಕ್ರಮಕೊಂಡವು. ಇದೇ ಅವಧಿಯಲ್ಲಿ ಅಂದರೆ ೧೯೨೯ ರಲ್ಲಿ (ಮದ್ರಾಸಿನ) ಚನ್ನೈನಲ್ಲಿ ಭೂ ಅಡಮಾನ ಬ್ಯಾಂಕು ಸ್ಥಾಪನೆಯಾದವು. ಅಲ್ಲದೇ ಸಹಕಾರಿ ಆಂದೋಲ ಪರಿಣಾಮವಾಗಿಯೇ ೧೯೩೫ ಭಾರತದ ರಿಜರ್ವ ಬ್ಯಾಂಕು ಸ್ಥಾಪನೆಯಾಗಿರುವುದು. ಒಂದು ಮಹತ್ವದ ಘಟನೆಯಾಗಿದೆ.

**೧೯೩೯–೧೯೪೦** : ದ್ವಿತೀಯ ಜಾಗತಿಕ ಪರಿಣಾಮವಾಗಿ ಭಾರತದ ಆರ್ಥಿಕ ಸ್ಥಿತಿ ಬಿಗಡಾಯಿಸಿತು. ವಿದೇಶದ ಆಮದು ಸರಕುಗಳು ಕಡಿಮೆಯಾಗಿ ಅನುಭೋಗಿ ಸರಕುಗಳ ಬೆಲೆಗಳು ಗಗನಕ್ಕೆರತೊಡಗಿದವು. ಆಹಾರ ಧಾನ್ಯಗಳ ಬೆಲೆಗಳ ಬೆಲೆಯನ್ನು ನಿಯಂತ್ರಿಸಲು ಮತ್ತು ಇತರ ಅವಶ್ಯಕ ವಸ್ತುಗಳ ಬೆಲೆಗಳನ್ನು ನಿಯಂತ್ರಿಸಲು ಹಾಗೂ ಆಹಾರ ಬಟ್ಟೆ ಧಾನ್ಯಗಳನ್ನು, ಸೀಮೆ ಎಣ್ಣೆ ಮುಂತಾದವುಗಳು ಹಂಚಲು ಸಹಕಾರಿ ಸಂಘಗಳಿಗೆ ಆದ್ಯತೆ ಕೊಡುವುದರಿಂದ ಸಹಕಾರಿ ಸಂಘಗಳಿಗೆ ಚೈತನ್ಯದಿಂದ ಕಾರ್ಯನಿರ್ವಹಿಸಲು ಪ್ರಾರಂಭ ಮಾಡಿದವು. ಇದರಿಂದ ಸಹಕಾರಿ ಕ್ಷೇತ್ರಕ್ಕೆ ಹೊಸ ಹುರುಪು ಮತ್ತು ಪ್ರೋತ್ಸಾಹ ಸಿಕ್ಕಂತಾಯಿತು.

ಕ್ರಿ.ಶ. ೧೯೪೫ ರಲ್ಲಿ ಭಾರತ ಸರಕಾರ ಶ್ರೀ ಸರಯ್ಯ ಅವರ ಅಧ್ಯಕ್ಷತೆಯಲ್ಲಿ ಹೊಸ ಸಮೀತಿಯನ್ನು ನೇಮಿಸಿ ದೇಶಕ್ಕೆ ಒಂದು ಸಮಗ್ರ ಸಹಕಾರ ಅಭಿವೃದ್ಧಿ ಯೋಜನೆಗೆ ತಯಾರಿಸಲು ಸಲಹೆ ನೀಡಿದ ಪರಿಣಾಮವಾಗಿ ೧೯೪೬ ರಲ್ಲಿ ಈ ಸಮಿತಿ ವರದಿಯ ಪ್ರಕಾರ ಪ್ರಾಥಮಿಕ ಸಹಕಾರ ಸಂಘ ಮತ್ತು ಮಾರಾಟ ಸಹಕಾರ ಸಂಘಗಳನ್ನು ಪುನರುಜ್ಜೀವನಗೊಳಿಸಿ ಅಭಿವೃದ್ಧಿ ಪಡಿಸಲು ಈ ಸಮಿತಿ ಕೆಲವು ಶಿಫಾರಸ್ಸುಗಳನ್ನು ನೀಡಿತು. ಆದರೆ ಈ ಸಮಿತಿಯ ಸಲಹೆಗಳನ್ನು ಕಾರ್ಯ ರೂಪದಲ್ಲಿ ತರುವಲ್ಲಿ ಭಾರತದ ಸ್ವಾತಂತ್ರ್ಯ ಚಳುವಳಿ ಅಡ್ಡಿಯಾಯಿತು.

ಭಾರತ ಸ್ವಾತಂತ್ರ್ಯ ನಂತರ ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಹಳ್ಳಿಯಿಂದ ದಿಲ್ಲಿಯವರೆಗೆ ಈ ಸಹಕಾರಿ ಚಳುವಳಿಗೆ ಬದ್ರಬುನಾದಿ ಸಿಕ್ಕ ನವ ಚೈತನ್ಯ ದೊರೆಯಿತು. ಪ್ರತಿ ಪಂಚವಾರ್ಷಿಕ ಯೋಜನೆಗಳಲ್ಲಿ ಒಂದೊಂದು ಸಹಕಾರ ತಜ್ಞರ ಸಮೀತಿ ನೇಮಿಸಿ ಅವರು ಶಿಫಾರಸ್ಸು ಮಾಡಿದ ಸಲಹೆಗಳನ್ನು ಕಾರ್ಯಾಚರಣೆಯಲ್ಲಿ ತಂದು ಭಾರತದ ರೈತರ ಆರ್ಥಿಕ ಅಭಿವೃದ್ಧಿಯನ್ನು ಸದೃಢಗೊಳಿಸಲು ಭಾರತ ಸರಕಾರವು ಕೋಟ್ಯಂತರ ಹಣವನ್ನು ವೆಚ್ಚ ಮಾಡುತ್ತಿದೆ. ಇದರಿಂದ ದೇಶದಲ್ಲಿ ಸಹಕಾರ ಚಳುವಳಿ ಹೆಚ್ಚು ಪ್ರಗತಿ ಹೊಂದಲು ಸಾಧ್ಯವಾಗುತ್ತದೆ.

ಹೀಗೆ ಭಾರತದಲ್ಲಿ ಸಹಕಾರ ಚಳುವಳಿ ವಿವಿಧ ಕ್ಷೇತ್ರಗಳಲ್ಲಿ ವಿವಿಧ ಹಂತಗಳಲ್ಲಿ[೫] ಬೆಳೆದು ಬಂದಿರುವುದು ಈ ಕೆಳಗಿನ ಸಹಕಾರಿ ಸಂಘಗಳು ಉದಾಹರಣೆಗಳಾಗಿವೆ.

**ಭಾರತದಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಸಹಕಾರಿ ಸಂಘಗಳು :**

೧) ಸಹಕಾರ ಪತ್ತಿನ ಸಂಘಗಳು
೨) ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು
೩) ರಾಜ್ಯ ಸಹಕಾರಿ ಅಪೇಕ್ಸ್ ಬ್ಯಾಂಕು
೪) ಪ್ರಾಥಮಿಕ ಒಕ್ಕಲುತನ ಪತ್ತಿನ ಸಹಕಾರ ಸಂಘಗಳು
೫) ಪಟ್ಟಣ ಸಹಕಾರಿ ಬ್ಯಾಂಕುಗಳು
೬) ರೈತರ ಸೇವಾ ಸಂಘಗಳು
೭) ಮಾರಾಟ ಸಹಕಾರಿ ಸಂಘಗಳು
೮) ರಾಜ್ಯ ಸಹಕಾರಿ ಮಾರಾಟ ಮಂಡಳ
೯) ಸಹಕಾರಿ ಸಂಸ್ಕರಣ ಸಂಘಗಳು
೧೦) ಸಹಕಾರ ಸಕ್ಕರೆ ಕಾರಖಾನೆಗಳು
೧೧) ಸಹಕಾರಿ ನೂಲಿನ ಗಿರಣಿಗಳು
೧೨) ಗ್ರಾಹಕರ ಸಹಕಾರಿ ಸಂಘಗಳು
೧೩) ಔದ್ಯೋಗಿಕ ಸಂಘಗಳು
೧೪) ನೇಕಾರರ ಸಹಕಾರಿ ಸಂಘಗಳು
೧೫) ವಿದ್ಯುತ್ ಉತ್ಪಾದಕ ಸಹಕಾರಿ ಸಂಘಗಳು
೧೬) ವೈದ್ಯಕೀಯ ಸಹಕಾರಿ ಸಂಘಗಳು
೧೭) ನೀರು ಬಳಕೆದಾರರ ಸಹಕಾರಿ ಸಂಘಗಳು
೧೮) ರಾಜ್ಯ ಸಹಕಾರಿ ಯುನಿಯನ್
೧೯) ಎಣ್ಣೆ ಉತ್ಪಾದಕರ ಸಹಕಾರ ಸಂಘಗಳು
೨೦) ಉಣ್ಣೆ ಉತ್ಪಾದನೆ ಮತ್ತು ಪಶು ಸಂಗೋಪನೆ ಸಹಕಾರ ಸಂಘಗಳು ಮುಂತಾದವು.

---

೫. ಸಹಕಾರಿ ಪಿತಾಮಹ ಶ್ರೀ ಸಿದ್ದನಗೌಡ ಪಾಟೀಲಃ ಎಮ್.ಮಂಜುನಾಥ ಬಮ್ಮನಕಟ್ಟಿ ಪುಟ ಸಂ. ೮೬

ಹೀಗೆ ಭಾರತದಲ್ಲಿ ವಿವಿಧ ಪ್ರಕಾರದ ಸಹಕಾರಿ ಸಂಘಗಳು ಸ್ಥಾಪನೆಯಾಗಿ ಕಾರ್ಯನಿರ್ವಹಿಸುತ್ತಿವೆ ಆದರೆ ಕೆಲವು ಸಹಕಾರಿ ಸಂಘಗಳು ವಿವಿಧ ಕಾರಣಗಳ ಮೂಲಕ ದುಸ್ಥಿತಿಯಲ್ಲಿವೆ.

ಸಹಕಾರ ಚಳುವಳಿಯು ಭಾರತದಲ್ಲಿ ೧೯೦೪ ರಲ್ಲಿ ಸಹಕಾರ ಸಂಘಗಳ ಕಾಯ್ದೆ ೧೯೦೪ ನ್ನು ಜಾರಿಗೆ ತರುವುದರೊಂದಿಗೆ ಪ್ರಾರಂಭವಾಗಿದ್ದು. ತದನಂತರ ದೀರ್ಘಪ್ರಯಾನದ ನಂತರ ಅದು ಹೆಚ್ಚು ಆಸೆಗಳೊಂದಿಗೆ ಮತ್ತು ನಿರೀಕ್ಷಣೆಗಳೊಂದಿಗೆ ಹೊಸ ಸಹಸ್ರಮಾನಕ್ಕೆ ಕಾಲಿರಿಸಿದೆ.

ಕಳೆದ ಶತಮಾನದಲ್ಲಿ ಎರಡು ಚಳುವಳಿಗಳು ಈ ದೇಶದ ಹೆಚ್ಚಿನ ಸಂಖ್ಯೆಯ ಜನ ಸಮುದಾಯದ ಜೀವನದ ಮೇಲೆ ಅಸಾಧರಣ ಪರಿಣಾಮವನ್ನು ಉಂಟು ಮಾಡಿದೆ. ಸ್ವಾತಂತ್ರ ಚಳುವಳಿಯು ಭಾರತವನ್ನು ಪಾರತಂತ್ರ್ಯದಿಂದ ಮುಕ್ತಗೊಳಿಸಿತು. ಶಕ್ತಿಶಾಲಿ ಆರ್ಥಿಕ ಬೆಳೆವಣಿಗೆಯ ಫಲವನ್ನು ದೇಶವು ಅನುಭವಿಸದೆ ರಾಜಕೀಯ ಸ್ವಾತಂತ್ರ್ಯಕ್ಕೆ ಯಾವುದೇ ಅರ್ಥವಿರುದಿಲ್ಲವೆಂಬುದು ಬೇಗನೆ ಅರಿವಾಯಿತು. ಸ್ವಾತಂತ್ರ್ಯ ಚಳುವಳಿಯು ಜನ ಸಮುದಾಯದ ಚಳುವಳಿಯಾಗಿತ್ತು. ಸಹಕಾರ ಚಳುವಳಿಯೂ ಹಾಗೆಯೇ ಜನಸಮುದಾಯದ ಚಳುವಳಿಯಾಗಿದೆ.

ಎರಡೂ ಚಳುವಳಿಗಳಲ್ಲಿ ಪ್ರಮುಖವಾಗಿ ಅಡಕವಾಗಿದ್ದ ಅಂಶಗಳೆಂದರೆ ಭಾರತದ ಕೋಟ್ಯಾಂತರ ಜನಗಳ ಅದರಲ್ಲೂ ಸಣ್ಣ ಮತ್ತು ಅತಿ ಸಣ್ಣ ರೈತರು ಭೂರಹಿತ ಕೃಷಿ ಕಾರ್ಮಿಕರು, ಜನ ಸಮುದಾಯದ ದುರ್ಬಲ ವರ್ಗಗಳು ಅಂದರೆ ಕೈಮಗ್ಗ ನೇಕಾರರು, ಮೀನುಗಾರರು, ಕುಶಲಕರ್ಮಿಗಳು ಇತ್ಯಾದಿ ವರ್ಗದ ಇತ್ತಾಸೆ ಮತ್ತು ಆಕಾಂಕ್ಷೆಗಳೇ ಆಗಿದ್ದವು. ಈ ವರ್ಗಗಳು ಬಡತನದ ಕಷ್ಟ ಕಾರ್ಪಣ್ಯದಿಂದ ನೊಂದವರಾಗಿ ಶತಮಾನಗಳ ಕಾಲ ಆರ್ಥಿಕ ಪ್ರಗತಿಯಿಂದ ಅಭ್ಯವಾಗುವ ಫಲವನ್ನು ಹೊಂದುವಿಕೆಯಿಂದ ವಂಚಿತರಾಗಿದ್ದರು. ಸ್ವಾತಂತ್ರ್ಯ ಚಳುವಳಿಗೆ ಪೂರ್ವದ ಅವಧಿಯು ಬಡಜನರ ಸ್ಥಿತಿಯನ್ನು ಉತ್ತಮಪಡಿಸಲು ನಡೆದ ಜನಪರ ಹೋರಾಟವಾಗಿತ್ತು. ಮತ್ತು ಈ ಪ್ರಯತ್ನದಲ್ಲಿ ಸಹಕಾರ ಸಂಸ್ಥೆಗಳು ನಿರ್ಣಾಯಕ ಪಾತ್ರವನ್ನು ವಹಿಸಬೇಕಾಗಿತ್ತು. ಜನ ಸಮುದಾಯದ ಅನೇಕ ವರ್ಗಗಳು ಸಹಕಾರ ಸಂಸ್ಥೆಗಳ ಆಶ್ರಯದ ನೆರಳಿನಡಿಯಲ್ಲಿ ಸಮಾವೇಶಗೊಂಡವು. ಅದು ಹಸಿರು ಕ್ರಾಂತಿಯೇ ಆಗಿರಲಿ (ವ್ಯವಸಾಯ), ಶ್ವೇತ ಕ್ರಾಂತಿಯೇ ಆಗಿರಲಿ (ಹೈನುಗಾರಿಕೆ,) ಹಳದಿ (ಕೋಳಿ ಸಾಕಾಣಿಕೆ) ಮತ್ತು ನೀಲಿ (ಮೀನುಗಾರಿಕೆ,) ಕ್ರಾಂತ್ರಿಗಳೇ ಆಗಿರಲಿ ಅವುಗಳ ಯಶಸ್ಸು ದೇಶದ ಮೂಲೆ ಮೂಲೆಗಳಲ್ಲಿ ವ್ಯವಸ್ಥಿತವಾಗಿ ಹರಡಿರುವ ಸಹಕಾರ ಜಾಲದ ಮೇಲೆ ಅವಲಂಬಿತವಾಗಿತ್ತು. ರೈತರಿಗೆ

ಖಾಸಗಿಯಾಗಿ ಸಾಲ ನೀಡುತ್ತಿದ್ದ ಲೇವಾದೇವಿಗಾರ ಎಂಬ ಪುರಾತನ ಸಂಸ್ಥೆಗಳು ಹಾಗೂ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳ ಬ್ಯಾಂಕಿಂಗ್ ಸಂಸ್ಥೆಗಳ ಬಲದಿಂದ ಮುಗ್ಗರಿಸಿತು. ನಗರದಲ್ಲಿ ಸಹಕಾರ ಚಳುವಳಿಯು ಮತ್ತಿತರ ಕ್ಷೇತ್ರದ ಬೆಳವಣಿಗೆಲ್ಲಿ ಕೂಡ ದೊಡ್ಡ ಪ್ರಮಾಣದಲ್ಲಿ ಮುಂದುವರೆಯಿತು.

೨೦ನೇ ಶತಮಾನದಲ್ಲಿ ೫ನೇ ದಶಕದಿಂದಲೂ ಪ್ರಾರಂಭಿಸಿ ದೇಶವು ಆರ್ಥಿಕ ಅಭಿವೃದ್ದಿಯ ರೂಪವನ್ನು ಪಡೆದುಕೊಂಡಿತು ಮತ್ತು ಗುರಿಗಳನ್ನು ಸಾಧಿಸುವುದಕ್ಕಾಗಿ ಸಮ್ಮಿಶ್ರ ಅರ್ಥವ್ಯವಸ್ಥೆಯನ್ನು ಆಯ್ಕೆ ಮಾಡಿಕೊಂಡಿತು.ಒಂದೆಡೆ ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳಿಗೆ ನಿರ್ದಿಷ್ಟ ಪಾತ್ರಗಳ ನಿರ್ವಹಣೆಯನ್ನು ವಹಿಸಲಾಯಿತು ಮತ್ತು ಇನ್ನೊಂದೆಡೆ ಇದುವರೆಗೂ ನಿರ್ದಿಷ್ಟವಾದ ಕ್ಷೇತ್ರವೆಂದು ಗುರುತಿಸಲ್ಪಡದೇ ಇದ್ದ ಸಹಕಾರ ಕ್ಷೇತ್ರವು ಸ್ವಂತ ಬಲದ ಮೇಲೆ ನಿಲ್ಲಲು ಅರ್ಥವ್ಯವಸ್ಥೆಯಲ್ಲಿ ತನ್ನದೇ ಆದ ನಿರ್ದಿಷ್ಟ ರೂಪವನ್ನು ಗಳಿಸಲು ಸಂಗ್ರಾಮದಲ್ಲಿ ಹೋರಾಟ ನಡೆಸಿತು. ಸಹಕಾರ ಸಂಸ್ಥೆಗಳ ಪ್ರವರ್ಧಮಾನಕ್ಕಾಗಿ ಅವುಗಳ ಅರ್ಥ ವ್ಯವಸ್ಥೆಯಲ್ಲಿ ರಾಜ್ಯವು ಭಾಗವಹಿಸುವುದನ್ನು ಸರ್ಕಾರವು ರಾಜ್ಯ ನಿರ್ದೇಶಕ ತತ್ವಗಳಲ್ಲಿ ಅಖಂಡ ಭಾಗವಾಗಿ ಸೇರ್ಪಡೆ ಮಾಡಿತು. ಕೃಷಿ ಅಭಿವೃದ್ಧಿಯು ಸರ್ಕಾರದ ಪ್ರಧಾನ ಕಾರ್ಯದ್ಯಮವಾಯಿತು. ಏರುತ್ತಿರುವ ಕೃಷಿ ಉತ್ಪಾದನೆ ಮತ್ತು ಉತ್ಪಾದನಾ ನಂತರದ ಸೂಕ್ತ ಸೌಲಭ್ಯಗಳನ್ನು ಏರ್ಪಡಿಸಲು ಸಹಕಾರ ಸಂಸ್ಥೆಗಳು ಭಾರಿ ಪ್ರಮಾಣದ ಕಾರ್ಯಕ್ರಮಗಳನ್ನು ಹಾಕಿಕೊಂಡವು. ವಿವಿಧ ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳ ವಿವಿಧ ಕ್ರೇತ್ರಗಳು ಪತ್ತಿನ ಸಹಕಾರ ಚಳುವಳಿಯ ವಿಸ್ತುತ ಜಾಲದಿಂದ ಸಹಾಯ ಪಡೆದವು.

ಸಾಲ ಮತ್ತು ಸಾಲೇತರ ಕ್ಷೇತ್ರಗಳಲ್ಲಿ ಸಹಕಾರ ಸಂಸ್ಥೆಗಳು ಅಣಬೆಗಳಂತೆ ಬೆಳೆದಿವೆ. ಸಾಲ ಮತ್ತು ಸಾಲೇತರ ಸಹಕಾರ ಸಂಸ್ಥೆಗಳೆರಡೂ ಸಹ ಪ್ರಾಥಮಿಕ ಮಟ್ಟದಿಂದ ರಾಷ್ಟ್ರಮಟ್ಟದವರೆಗೆ ವಿವಿಧ ಹಂಂತದ ವ್ಯವಸ್ಥೆಯನ್ನು ಹೊಂದಿವೆ. ಅದು ಪ್ರಾಥಮಿಕ, ಮಾಧ್ಯಮಿಕ ಮತ್ತು ನಡುವಣ ಹಂತದ ಕ್ಷೇತ್ರದಲ್ಲಿ ಅರ್ಥ ವ್ಯವಸ್ಥೆಯ ಎಲ್ಲಾ ಕಡೆಗಳಲ್ಲೂ ಸಹಕಾರಿ ಸಂಸ್ಥೆಗಳ ಭಾರಿ ಪ್ರಮಾಣದ ಭಿನ್ನ ರೀತಿಯ ಚಟುವಟಿಕೆಗಳನ್ನು ಹೊಂದಿವೆ. ಇಂದು ಭಾರತದಲ್ಲಿ ಸಹಕಾರ ಚಳುವಳಿಯು ವಿಶ್ವದಲ್ಲಿಯೇ ದೊಡ್ಡದಾಗಿದೆ. ಬದುಕಿನ ಎಲ್ಲಾ ಕ್ಷೇತ್ರಗಳಲ್ಲೂ ಕೃಷಿ, ತೋಟಗಾರಿಕೆ ಸಾಲ ಮತ್ತು ಬ್ಯಾಂಕಿಂಗ್ ಗೃಹ ನಿರ್ಮಾಣ, ಕೃಷಿ ಕೈಗಾರಿಕೆ, ಗ್ರಾಮೀಣ ವಿದ್ಯುದೀಕರಣ, ನೀರಾವರಿ, ಜಲಸಂರಕ್ಷಣೆ ಕಾರ್ಮಿಕ, ದುರ್ಬಲವರ್ಗಗಳು, ಹೈನುಗಾರಿಕೆ, ಗ್ರಾಹಕ ವರ್ಗ. ಸಾರ್ವಜನಿಕ ವಿತರಣಾ ವ್ಯವಸ್ಥೆ, ಗಿರಿಜನಾಭಿವೃದ್ಧಿ,

ಅಂತರಾಷ್ಟ್ರೀಯ ವ್ಯಾಪರ, ರಪ್ತು, ಕೃಷಿ ವ್ಯಾಪರ, ಮಾನವ ಸಂಪನ್ಮೂಲ ಅಭಿವೃದ್ಧಿ, ಮಾಹಿತಿ ತಂತ್ರಜ್ಞಾನ ಕ್ಷೇತ್ರಗಳನ್ನೆಲ್ಲಾ ಸಹಕಾರ ಚಳುವಳಿಯು ಅವರಿಸಿಕೊಂಡಿದೆ.

**೨.೪ ಕರ್ನಾಟಕದಲ್ಲಿ ಸಹಕಾರಿ ಸಂಘಗಳ ಉಗಮ ಮತ್ತು ವಿಕಾಸ :**

ಭಾರತದಲ್ಲಿ ಸಹಕಾರ ಚಳುವಳಿಯ ೧೯೦೪ ರಲ್ಲಿ ಸಹಕಾರಿ ಸಂಘಗಳ ಕಾಯ್ದೆ[೧] ೧೯೦೪ ನ್ನು ಜಾರಿಗೆ ತರುವ ಮೂಲಕ ಕರ್ನಾಟಕದಲ್ಲಿ ಗದ್ದು ಜಿಲ್ಲೆಯ ಕಣಗಿಹಾಳದಲ್ಲಿ ೧೯೦೫ ರಂದು ನೊಂದಾಯಿಸಲ್ಪಟ್ಟ ಶ್ರೀ ಸಿದ್ದನಗೌಡ ಸಣ್ಣರಾಮನಗೌಡ ಪಾಟೀಲ ಸಂಸ್ಥಾಪಕ ಅಧ್ಯಕ್ಷನಾಗಿದ್ದ ಈ ಸಹಕಾರಿ ಸಂಘ ದೇಶದಲ್ಲಿ ಮೊದಲನೆಯದು.

ಈ ಸಹಕಾರಿ ಸಂಘಗಳಿಗೆ ಸಂಬಂಧಿಸಿದಂತೆ ಮೈಸೂರ ಸಹಕಾರ ಸಂಘಗಳ ಕಾಯ್ದೆ ೧೯೫೯ ನಮ್ಮ ರಾಜ್ಯದ ಮೊದಲ ಸಹಕಾರ ಶಾಸನ, ಇದು ೨೫-೦೫-೧೯೬೦ ರಿಂದ ಈ ಕಾಯ್ದೆ ಅಸ್ತಿತ್ವಕ್ಕೆ ಬಂದಿರುತ್ತದೆ. ಕರ್ನಾಟಕವು ದೇಶದ ಸಹಕಾರ ಚಳುವಳಿಯಲ್ಲಿ ಮೂರನೆಯಲ್ಲಿದೆ. ರೈತರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದೆ.

ಕರ್ನಾಟಕ ಸಹಕಾರವು ಕೃಷಿ ಸಾಲವನ್ನು ಒಂದು ಲಕ್ಷವರೆಗೆ ಶೇ.೦ ಬಡ್ಡಿ ಒಂದು ಲಕ್ಷದಿಂದ ೩ ಲಕ್ಷ ವರೆಗೆ ಶೇ.೧% ಮತ್ತು ೩ ಲಕ್ಷ ಮೇಲ್ಪಟ್ಟ ಸಾಲಗಳಿಗೆ ಶೇ. ೩ ರ ಬಡ್ಡಿ ದರದಲ್ಲಿ ಸಾಲ ವಿತರಿಸಲಾಗುತ್ತಿದೆ.

ಈ ಸಹಕಾರಿ ಸಂಘಗಳು ವಿಶೇಷವಾಗಿ ಗ್ರಾಮೀಣ ಪ್ರದೇಶಗಳು ಕೃಷಿಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ರಾಜ್ಯದ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಈ ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳು ರಾಜ್ಯದ ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿವೆ. ಜಾಗತೀಕರಣ ಮತ್ತು ಉಧಾರೀಕರಣದ ಬರಾಟೆಯಲ್ಲಿ ಆರ್ಥಿಕ ಸ್ವಾವಲಂಬನೆಗೆ ಹೆಚ್ಚು ಸೂಕ್ತ ಪರಿಸರವಾಗಿದೆ.

ನಮ್ಮ ದೇಶದ ಮೊದಲ ಸಹಕಾರ ಸಂಘ ಕರ್ನಾಟಕದ ಗದಗ ಜಿಲ್ಲೆಯ ಕಣಗಿನಹಾಳದಲ್ಲಿ ೧೯೦೫ ರಲ್ಲಿ ನೋದಾಯಿಲ್ಪಟ್ಟಿದೆ. ಶ್ರೀ ಸಿದ್ದನಗೌಡ ಸಣ್ಣರಾಮನಗೌಡ, ಸಂಸ್ಥಾಪಕ ಅಧ್ಯಕ್ಷರಾಗಿದ್ದರು ಮತ್ತು ಇವರನ್ನು ನಮ್ಮ ದೇಶದ ಸಹಕಾರ ಚಳುವಳಿಯ ಪ್ರವರ್ತಕರು ಎಂದು ಪರಿಗಣಿಸಲಾಗುತ್ತದೆ.

---

೧. ಅಂತರ್ಜಾಲದ ಮಾಹಿತಿ.

ಸಹಕಾರ ಸಂಘಗಳಿ ಸಂಬಂಧಿಸಿದಂತೆ, ಮೈಸೂರು ಸಹಕಾರ ಸಂಘಗಳ ಕಾಯಿದೆ ೧೯೫೯ ನಮ್ಮ ರಾಜ್ಯದ ಮೊದಲ ಶಾಸನ ಮತ್ತು ೨೫-೦೫-೧೯೬೦ ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ.

ಕರ್ನಾಟಕ, ಭಾರತದ ಸಹಕಾರ ಚಳುವಳಿಯಲ್ಲಿ ಮೂರನೇ ಸ್ಥಾನದಲ್ಲಿದೆ. ಇದು ಜನರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಕರ್ನಾಟಕ ಸಹಕಾರವು ಕೃಷಿ ಸಾಲವನ್ನು ಒಂದು ಲಕ್ಷದವರೆಗೆ ಶೇ. ೦ ಮತ್ತು ಒಂದು ಲಕ್ಷದಿಂದ ೩ ಲಕ್ಷದವರೆಗೆ ಶೇ. ೧ ಮತ್ತು ೩ ಲಕ್ಷದ ಮೇಲ್ಪಟ್ಟು ಶೇ. ೩ ರ ಬಡ್ಡಿ ದರದಲ್ಲಿ ವಿತರಿಸಲಾಗುತ್ತದೆ.

ಸ್ವಸಹಾಯ ಗುಂಪುಗಳು ಸಹಕಾರ ಸಂಘಗಳ ಮುಖಾಂತರ ಶೇ. ೪ ರ ಬಡ್ಡಿ ದರದಲ್ಲಿ ಸಾಲ ನೀಡಲಾಗುತ್ತಿದೆ. ಸರ್ಕಾರವು ಸಹಕಾರ ಸಂಘಗಳಿಗೆ ಇಂಟರ್-ಸಬ್ಸಿಡಿಯನ್ನು ನೀಡುತ್ತದೆ.

ಮಾರ್ಚ ೨೦೦೮ ರಲ್ಲಿ ಭಾರತ ಸರ್ಕಾರವು ನಬಾರ್ಡ್ ಮತ್ತು ರಾಜ್ಯ ಸರ್ಕಾರ ಪ್ರೊ.ವೈದ್ಯನಾಥನ್ ಸಮಿತಿಯ ಶಿಫಾರಸುಗಳನ್ನು ಅನುಷ್ಠಾನಕ್ಕೆ ತಂದ ನಂತರ, ಕೃಷಿ ಸಾಲದ ರಚನೆ ಮತ್ತು ಸಹಕಾರ ಸಂಘಗಳ ವಿಷಯದಲ್ಲಿ ರಾಜ್ಯ ಸರ್ಕಾರದ ಪಾತ್ರವು ನಿಯಂತ್ರಕ, ಮೇಲ್ವಿಚಾರಕದಿಂದ ಗೆಳೆಯ, ತತ್ವಜ್ಞಾನಿ ಮತ್ತು ಗೈಡ್ ಆಗಿ ಕಾರ್ಯನಿರ್ವಹಿಸುತ್ತಿದೆ.

ರಾಜ್ಯದಲ್ಲಿ ಸಹಕಾರ ವಲಯದ ಬರಳವಣಿಗೆಯು ಮುಂಬರುವ ವರ್ಷಗಳಲ್ಲಿ ವೃತ್ತಿಪರವಾಗಿ,ಸ್ವತಂತ್ರ ನಿರ್ಧಾರ ತೆಗೆದುಕೊಂಡು ಕಾರ್ಯನಿರ್ವಹಿಸುವ ನಿಟ್ಟಿನಲ್ಲಿ ಭರವಸೆಯನ್ನು ತೋರಿಸುತ್ತಿವೆ.

ಸಹಕಾರ ಚಳವಳಿಯು ಕ್ರೆಡಿಟ್, ಮಾರ್ಕೆಟಿಂಗ್, ಗ್ರಾಹಕರು, ರೇಷ್ಮೆ ಇಂಡಸ್ಟ್ರಿ, ಡೈರಿ, ಮೀನುಗಾರಿಕೆ, ಸಕ್ಕರೆ, ಗೃಹ ನಿರ್ಮಾಣ, ಗೋದಾಮು ರಚನೆ ನಂತರ ಎಲ್ಲಾ ಬೆಳವಣಿಗೆಯ ಕ್ಷೇತ್ರಗಳಲ್ಲಿ ವ್ಯಾಪಕವಾಗಿ ಹರಡಿವೆ.

ಸಹಕಾರ ಸಂಸ್ಥೆಗಳು ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಕೃಷಿ ಮತ್ತು ಸಂಬಂಧಿಸಿದ ಕ್ಷೇತ್ರಗಳಲ್ಲಿ ದೇಶದ ಸಾಮಾಜಿಕ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಸಹಕಾರ ಸಂಸ್ಥೆಗಳು ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಒಂದು ಪ್ರಮುಖ ಪಾತ್ರವನ್ನು ವಹಿಸುತ್ತಿವೆ ಮತ್ತು ಜಾಗತೀಕರಣದ ಉಧಾರೀಕರಣ, ಬದಲಾಗುತ್ತಿರುವ ಆರ್ಥಿಕ ಪರಿಸರದಲ್ಲಿ ಹೆಚ್ಚು ಸೂಕ್ತ ಎಂಬುದು ನಮ್ಮ ನಂಬಿಕೆಯಾಗಿದೆ.

# ಕರ್ನಾಟಕದಲ್ಲಿ ಸಹಕಾರ ಸಂಘಗಳ ಬೆಳವಣಿಗೆ.

(ರೂ. ಲಕ್ಷಗಳಲ್ಲಿ)

| ವರ್ಷ | ಸಹಕಾರ ಸಂಘಗಳ ಸಂಖ್ಯೆ | ಸದಸ್ಯರು | ಷೇರು ಬಂಡವಾಳ | ದುಡಿಯುವ ಬಂಡವಾಳ |
|---|---|---|---|---|
| ೧೯೦೫-೦೬ | ೫ | ೩೮೬ | ೦.೧೧ | ೦.೧೪ |
| ೧೯೨೫-೨೬ | ೧೬೦೩ | ೯೨.೨೯೨ | ೩೫.೫೨ | ೧೧೨.೩೮ |
| ೧೯೫೦-೫೧ | ೫೧೯೦ | ೫.೦೧.೨೮೧ | ೧೩೮.೭೪ | ೬೯೦.೯೦ |
| ೧೯೭೫-೭೬ | ೨೨೭೧೩ | ೫೯.೪೫.೦೦೯ | ೧೨.೫೪೩.೦೦ | ೯೧.೬೩೭.೦೦ |
| ೨೦೦೦-೦೧ | ೨೯೨೩೦ | ೧.೬೧.೬೭.೦೦೦ | ೧.೪೭.೩೧೬.೦೦ | ೨೧.೧೯.೮೬೭.೬೫ |
| ೨೦೦೫-೦೬ | ೩೨೫೭೭ | ೨.೦೫.೦೦.೦೦೦ | ೧.೯೧.೭೦೦.೦೦ | ೨೬.೪೭.೫೦೦.೦೦ |
| ೨೦೦೭-೦೮ | ೩೩೩೯೪ | ೨.೦೯.೦೦.೦೦೦ | ೨.೬೯.೦೦೦.೦೦ | ೨೭.೧೮.೦೦೦.೦೦ |
| ೨೦೦೮-೦೯ | ೩೪೦೨೫ | ೧.೮೭.೮೮.೭೪೧ | ೨.೭೮.೫೭೪.೮೯ | ೩೨.೬೯.೩೨೧.೬೬ |
| ೨೦೦೯-೧೦ | ೩೪೮೬೩ | ೧.೯೯.೦೪.೭೩೦ | ೩.೧೭.೧೩೬.೯೩ | ೩೮.೨೪.೮೯೧.೯೯ |
| ೨೦೧೦-೧೧ | ೩೫೫೦೨ | ೨.೧೫.೩೩.೬೫೧ | ೩.೪೭.೯೦೦.೦೦ | ೪೧.೩೫.೫೦೦.೦೦ |
| ೨೦೧೧-೧೨ | ೩೬೪೫೭ | ೨.೬೩.೯೯.೦೭೪ | ೩.೦೨.೨೦೦.೦೦ | ೫೧.೮೬.೪೦೦.೦೦ |
| ೨೦೧೨-೧೩ | ೩೭೪೬೮ | ೨. ೧೮.೧೧.೬೮೭ | ೩.೧೨.೯೦೦.೦೦ | ೫೮.೬೯.೨೦೦.೦೦ |

# ಅಂಕಿ ಅಂಶಗಳ ವಿವರ

| ಕ್ರ.ಸಂ. | ವಿಷಯ | ೩೧-೦೩-೨೦೧೩ ಅಂತ್ಯಕ್ಕೆ |
|---|---|---|
| ೧ | ಸಹಕಾರ ಸಂಘಗಳ ಸಂಖ್ಯೆ | ೩೭೪೬೮ |
| | ಎ) ಕಾರ್ಯನಿರತ ; | ೩೩೧೭೨ |
| | ಬಿ) ಸಮಾಪನೆ | ೨೦೧೪ |
| | ಸಿ) ಸ್ಥಗಿತ | ೨೨೮೨ |
| ೨ | ಷೇರು ಬಂಡವಾಳ (ರೂ. ಕೋಟಿಗಳಲ್ಲಿ) | ೩೧೨೯ |
| | ಎ) ಸರ್ಕಾರದ ಷೇರು | ೧೯೩ |
| | ಬಿ) ಸದಸ್ಯರ ಷೇರು | ೨೯೩೬ |
| ೩ | ಸದಸ್ಯರ ಸಂಖ್ಯೆ | ೨೧೮೧೧೬೮೭ |
| ೪ | ದುಡಿಯುವ ಬಂಡವಾಳ (ರೂ. ಕೋಟಿಗಳಲ್ಲಿ) | ೫೮೬೯೨ |
| ೫ | ಠೇವಣಿ (ರೂ. ಕೋಟಿಗಳಲ್ಲಿ) | ೨೮೯೦೧ |
| ೬ | ಸಹಕಾರ ಸಂಘಗಳಿಗೆ ಒಳಪಟ್ಟಿರುವ ಗ್ರಾಮಗಳು % | ೧೦೦% |
| ೭ | ಲಾಭದಲ್ಲಿರುವ ಸಹಕಾರ ಸಂಘಗಳ ಸಂಖ್ಯೆ | ೨೦೦೧೭ |
| | ನಷ್ಟದಲ್ಲಿರುವ ಸಹಕಾರ ಸಂಘಗಳ ಸಂಖ್ಯೆ | ೧೬೪೫೧ |

ಸದಸ್ಯರು ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವುದರ ಮೂಲಕ ಸಹಕಾರ ಸಂಘಗಳ ಬೆಳವಣಿಗೆ, ಸ್ವಾವಲಂಬನೆ, ಸ್ವಾಯತ್ತತೆ ಮತ್ತು ಆರ್ಥಿಕವಾಗಿ ಸಬಲತೆ ಹೊಂದುವಂತೆ ಸಂವರ್ಧನೆಗೊಳಿಸುವುದು ಹಾಗೂ ಉತ್ತೇಜಿಸುವುದು.

**೨.೫ ಸಂಘದ ಧ್ಯೇಯಗಳು :**

೧. ಪ್ರಾಮಾಣಿಕ ಸಹಕಾರ ಸಂಸ್ಥೆಗಳನ್ನು ಸಂಘಟಿಸಲು ಹಾಗೂ ಸಹಕಾರ ಮೂಲ ತತ್ವಗಳನುಸಾರ ಸಂಸ್ಥೆಗಳನ್ನು ಸುಸ್ಥಿತಿಯ ಮಾರ್ಗದಲ್ಲಿ ನಡೆಸಲು ಕ್ರಮವಿಡವುದು.

೨. ರಾಜ್ಯದಲ್ಲಿನ ಸಹಕಾರ ಚಳುವಳಿಯನ್ನು ಅಭಿವೃದ್ದಿಪಡಿಸಿ, ಜನರ ಆರ್ಥಿಕ ಹಿತಾಸಕ್ತಿ ಮತ್ತು ಕ್ಷೇಮಾಭಿವೃದ್ಧಿ ಉತ್ತಮಪಡಿಸಲು ಮಾರ್ಗದರ್ಶನ ನೀಡುವುದು.

೩. ಎಲ್ಲಾ ವಿಧದ ಸಹಕಾರಿ ಸಂಸ್ಥೆಗಳಿಗೆ ಸ್ನೇಹಿತ, ತತ್ವಜ್ಞಾನಿ ಮಾರ್ಗದರ್ಶಕನಾಗಿ ಸೇವೆ ಮಾಡುವುದು.

## ಸಹಕಾರ ಇಲಾಖೆಯಿಂದ ನಿರ್ವಹಿಸುವ ಶಾಸನಾತ್ಮಕ ಮತ್ತು ನ್ಯಾಯಾಂಗದ ಅಧಿನಿಯಮಗಳು

೧. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ ೧೯೫೯ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು ೧೯೬೦.

೨. ಕರ್ನಾಟಕ ಲೇವಾದೇವಿಗಾರರ ಅಧಿನಿಯಮ ೧೯೬೧ ಮತ್ತು ಕರ್ನಾಟಕ ಲೇವಾದೇವಿಗಾರರ ನಿಯಮಗಳು ೧೯೬೫.

೩. ಕರ್ನಾಟಕ ಗಿರಿವಿದಾರರ ಅಧಿನಿಯಮ ೧೯೬೧ ಮತ್ತು ನಿಯಮಗಳು ೧೯೬೬.

೪. ೧೯೮೨ ರ ಚೀಟಿ ನಿಧಿಗಳ ಅಧಿನಿಯಮ ಮತ್ತು ಚೀಟಿನಿಧಿಗಳ (ಕರ್ನಾಟಕ) ನಿಯಮಾವಳಿ ೧೯೮೩.

೫. ಕರ್ನಾಟಕ ಋಣ ಪರಿಹಾರ ಅಧಿನಿಮ ೧೯೮೦.

೬. ಕರ್ನಾಟಕ ಪಬ್ಲಿಕ್ ಮನಿ (ರಿಕವರಿ ಆಫ್ ಡ್ಯೂಸ್) ಅಧಿನಿಯಮ ೧೯೮೦.

೭. ಕರ್ನಾಟಕ ಅಗ್ರಿಕಲ್ಚರಲ್ ಕ್ರೆಡಿಟ್ ಆಪರೇಷನ್ಸ್ ಮತ್ತು ಮಿಸಲೇನಿಯಸ್ ಪ್ರಾವಿಷನ್ಸ್ ಕಾಯಿದೆ ೧೯೭೪.

೮. ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ ೧೯೯೭ ಮತ್ತು ಕರ್ನಾಟಕ ಸೌಹಾರ್ದ ಸಹಕಾರಿ ನಿಯಮಗಳ ೨೦೦೪.

೯. ಕರ್ನಾಟಕ ಮಿತಿಮೀರಿದ ಬಡ್ಡಿ ವಿಧಿಸುವಿಕೆಯ ನಿಷೇದ ಅಧಿನಿಯಮ ೨೦೦೪.

೧೦.ಬಹು ರಾಜ್ಯಗಳ ಸಹಕಾರ ಕಾಯ್ದೆ (ಭಾಗಶ)

### ೨.೬ ಕರ್ನಾಟಕ ರಾಜ್ಯದಲ್ಲಿ ವಿಭಾಗವಾರು ವಿವಿಧ ಸಹಕಾರ ಸಂಘಗಳು :

ಕರ್ನಾಟಕ ರಾಜ್ಯದಲ್ಲಿ ಸಹಕಾರ ಸಂಘಗಳು ಎಲ್ಲಾ ಸಾಮಾಗಿಕ ಮತ್ತು ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ಅದೇ ರೀತಿ ರಾಜ್ಯವು ಎಲ್ಲಾ ವಿಧಧ ಮತ್ತು ವರ್ಗದ ಸಂಘಗಳನ್ನು ಹೊಂದಿದೆ. ನಿರಂತರ ಪ್ರಯತ್ನದಿಂದಾಗಿ ರಾಜ್ಯದಲ್ಲಿ ಆರ್ಥಿಕವಾಗಿ ಸಹಕಾರ ಸಂಘಗಳು ಪ್ರಗತಿಯನ್ನು ಸಾಧಿಸಿರುತ್ತವೆ, ಮುಖ್ಯವಾಗಿ ಕೃಷಿಗೆ ಸಂಬಂಧಿಸಿದಂತೆ ಸಾಲ

ವಿತರಣೆ, ರಸ ಗೊಬ್ಬರ ವಿತರಣೆ, ಕೃಷಿ ಉಪಕರಣಗಳ ವಿತರಣೆ, ಗ್ರಾಹಕ ಸಾಮಗ್ರಿಗಳ ವಿತರಣೆ, ಹೈನುಗಾರಿಕೆ, ಮೀನುಗಾರಿಕರ, ಪಟ್ಟಣ ಬ್ಯಾಂಕ್‌ಗಳು ಇತ್ಯಾದಿ. ಸಹಕಾರ ಸಂಘಗಳ ನಿಬಂಧಕರ ಕಾರ್ಯವ್ಯಾಪ್ತಿಗೆ ೩೬೪೬೫ ಸಹಕಾರ ಸಂಘಗಳಿದ್ದು, ಒಟ್ಟು ೩೨೦೦೬ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿವೆ.

<u>ವಿಭಾಗವಾರು ಸಹಕಾರ ಸಂಘಗಳು</u>

| **ಕ್ರ.ಸಂ.** | **ವಿಭಾಗವಾರು ಸಹಕಾರ ಸಂಘಗಳ ವಿವರ** | **ಒಟ್ಟು** |
|---|---|---|
| | **ಕಾರ್ಯಕ್ಷೇತ್ರ** | |
| ೧ | ಬಹುರಾಜ್ಯ ಮಟ್ಟದ ಸಹಕಾರ ಸಂಘಗಳ ಸಂಖ್ಯೆ | ೧೪ |
| ೨ | ರಾಜ್ಯ ಮಟ್ಟದ ಮಹಾಮಂಡಳಗಳ/ಸಂಸ್ಥೆಗಳ ಸಂಖ್ಯೆ | ೧೪೨ |
| ೩ | ಜಿಲ್ಲಾ ಮಟ್ಟ ಮೀರಿ ರಾಜ್ಯ ಮಟ್ಟದ ಒಳಗಿರುವ ಸಹಕಾರ ಸಂಘಗಳ ಸಂಖ್ಯೆ | ೩೯೦ |
| ೪ | ಜಿಲ್ಲಾ ಮಟ್ಟದ ಸಹಕಾರ ಸಂಘಗಳ ಸಂಖ್ಯೆ | ೬೩೦ |
| ೫ | ತಾಲ್ಲೂಕು ಮಟ್ಟ ಮೀರಿ ಜಿಲ್ಲಾ ಮಟ್ಟದ ಒಳಗಿರುವ ಸಹಕಾರ ಸಂಘಗಳ ಸಂಖ್ಯೆ | ೧೧೦೬ |
| ೬ | ತಾಲ್ಲೂಕು ಮಟ್ಟದ ಸಹಕಾರ ಸಂಘಗಳ ಸಂಖ್ಯೆ | ೨೪೪೯ |
| ೭ | ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುವ ಸಹಕಾರ ಸಂಘಗಳ ಸಂಖ್ಯೆ | ೩೩೬೯೯ |
| | **ಒಟ್ಟು** | **೩೮೪೩೦** |
| | **ಲೆಕ್ಕ ಪರಿಶೋಧನಾ ವರ್ಗೀಕರಣ** | |
| ೧ | "ಎ" ವರ್ಗೀಕರಣ | ೧೯೯೨ |
| ೨ | "ಬಿ" ವರ್ಗೀಕರಣ | ೯೩೮೨ |
| ೩ | "ಸಿ" ವರ್ಗೀಕರಣ | ೧೯೪೯೭ |
| ೪ | "ಡಿ" ವರ್ಗೀಕರಣ | ೩೩೨೧ |
| ೫ | "ಎನ್" ಲೆಕ್ಕ ಪರಿಶೋಧನೆಯಾಗದೆ ಇರುವ ಸಂಖ್ಯೆ | ೪೨೩೮ |
| | **ಒಟ್ಟು** | **೩೮೪೩೦** |

| ಆರ್ಥಿಕ ಪರಿಸ್ಥಿತಿ | | |
|---|---|---|
| ೧ | ಲಾಭದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಘಗಳ ಸಂಖ್ಯೆ | ೨೧೫೯೨ |
| ೨ | ನಷ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಘಗಳ ಸಂಖ್ಯೆ | ೧೨೭೯೯ |
| ೩ | ಲಾಭ ನಷ್ಟವಿಲ್ಲದೆ ಕಾರ್ಯನಿರ್ವಹಿಸುತ್ತಿರುವ ಸಂಘಗಳ ಸಂಖ್ಯೆ | ೪೫೫೯ |
| | ಒಟ್ಟು | ೩೮೪೩೦ |
| ಕಾರ್ಯವೈಖರಿ | | |
| ೧ | ಕಾರ್ಯನಿರ್ವಹಿಸುತ್ತಿರುವ ಸಂಘಗಳ ಸಂಖ್ಯೆ | ೩೩೬೭೮ |
| ೨ | ನಿಷ್ಕ್ರೀಯಗೊಂಡ ಸಂಘಗಳ ಸಂಖ್ಯೆ | ೨೩೮೮ |
| ೩ | ಸಮಾಪನೆಗೊಂಡದ್ದು ಸಂಘಗಳ ಸಂಖ್ಯೆ | ೨೩೬೪ |
| | ಒಟ್ಟು | ೩೮೪೩೦ |
| ವಿವಿಧ ವರ್ಗಕ್ಕೆ ಸಂಗಂಧಿಸಿದ ಸಂಘಗಳು | | |
| ೧ | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಸಂಘಗಳ ಸಂಖ್ಯೆ | ೫೯೩ |
| ೨ | ಮಹಿಳಾ ಸಹಕಾರ ಸಂಘಗಳ ಸಂಖ್ಯೆ | ೪೯೦೧ |
| ೩ | ಪರಿಶಿಷ್ಟ ಜಾತಿ ಸಹಕಾರ ಸಂಘಗಳ ಸಂಖ್ಯೆ | ೨೪೦ |
| ೪ | ಪರಿಶಿಷ್ಟ ಪಂಗಡ ಸಹಕಾರ ಸಂಘಗಳ ಸಂಖ್ಯೆ | ೯೫ |
| ೫ | ಅಲ್ಪಸಂಖ್ಯಾತರ ಸಹಕಾರ ಸಂಘಗಳ ಸಂಖ್ಯೆ | ೫೧೭ |
| ೬ | ಸಾಮಾನ್ಯ ಸಹಕಾರ ಸಂಘಗಳ ಸಂಖ್ಯೆ | ೩೨೦೮೪ |
| | ಒಟ್ಟು | ೩೮೪೩೦ |

## ದಿ: ೩೧-೦೩-೨೦೧೪ ರ ಅಂತ್ಯಕ್ಕೆ ಸಹಕಾರ ಸಂಘಗಳ ಅಂಕಿ ಅಂಶಗಳು

| ಕ್ರ. ಸಂ | ವಿವಿಧ ಸಹಕಾರ ಸಂಘಗಳು | ಕಾರ್ಯನಿರ್ವಹಿಸುತ್ತಿರುವ ಸಹಕಾರ ಸಂಘಗಳು | ನಿಷ್ಕ್ರೀಯಗೊಂಡ ಸಹಕಾರ ಸಂಘಗಳು | ಸಮಾಪನೆಗೊಂಡ ಸಹಕಾರ ಸಂಘಗಳು | ಒಟ್ಟು |
|---|---|---|---|---|---|
| ೧ | ಬಹು ರಾಜ್ಯ ಮಟ್ಟದ ಸಹಕಾರ ಸಂಘಗಳು | ೧೪ | - | - | ೧೪ |
| ೨ | ರಾಜ್ಯ ಮಟ್ಟದ ಸಹಕಾರ ಸಂಘಗಳು | ೪೦ | ೦ | ೫ | ೪೫ |
| ೩ | ಜಿಲ್ಲಾ ಮಟ್ಟದ ಸಹಕಾರ ಸಂಘಗಳು/ಸಹಕಾರಿ ಬ್ಯಾಂಕ್‌ಗಳು | ೨೧ | - | - | ೨೧ |

| | | | | | |
|---|---|---|---|---|---|
| ೪ | ಪ್ರಾ.ಸ.ಕೃ.ಪತ್ತಿನ ಅಭಿವೃದ್ಧಿ ಮತ್ತು ಗ್ರಾಮೀಣ ಬ್ಯಾಂಕ್ ನಿ., | ೧೭೫ | – | ೨ | ೧೭೭ |
| **೫** | **ಪ್ರಾ.ಕೃ.ಪತ್ತಿನ ಸಹಕಾರ ಸಂಘಗಳು** | **೫೦೨೩** | **೧೭** | **೧೯೬** | **೫೨೩೬** |
| ೬ | ಲ್ಯಾಂಪ್ಸ್ ಸಹಕಾರ ಸಂಘಗಳು | ೨೪ | – | – | ೨೪ |
| ೭ | ರೇಷ್ಮೆ ಬೆಳೆಗಾರರ ಸಹಕಾರ ಸಂಘಗಳು | ೩೮ | ೩ | ೧೭ | ೫೮ |
| ೮ | ಸಹಕಾರಿ ಗ್ರೇನ್ ಬ್ಯಾಂಕುಗಳು | ೯೩ | ೮ | ೧೦ | ೧೧೧ |
| ೯ | ಪಟ್ಟಣ ಸಹಕಾರ ಬ್ಯಾಂಕುಗಳು | ೨೫೦ | ೦ | ೪೦ | ೨೯೦ |
| ೧೦ | ಇತರೆ ಪತ್ತಿನ ಸಹಕಾರ ಸಂಘಗಳು | ೨೩೭೭ | ೧೫೪ | ೧೪೦ | ೨೬೭೧ |
| ೧೧ | ನೌಕರರ ಪತ್ತಿನ ಸಹಕಾರ ಸಂಘಗಳು | ೧೦೩೩ | ೮೫ | ೬೦ | ೧೧೭೮ |
| ೧೨ | ತಾ.ಕೃ.ಹು.ಮಾ.ಸಹಕಾರ ಸಂಘಗಳು(ಟಿ.ಎ.ಪಿ.ಸಿ.ಎಂ.ಎಸ್) | ೧೮೦ | ೦ | ೯ | ೧೮೯ |
| ೧೩ | ಇತರೆ ಮಾರಾಟ ಸಹಕಾರ ಸಂಘಗಳು | ೮೮ | ೧೧ | ೧೨ | ೧೧೧ |
| ೧೪ | ಸಹಕಾರಿ ಸಕ್ಕರೆ ಕಾರ್ಖಾನೆಗಳು | ೨೩ | ೩ | ೧೧ | ೩೭ |
| ೧೫ | ಸಂಸ್ಕರಣ ಸಹಕಾರ ಸಂಘಗಳು | ೯೬ | ೧೩ | ೨೨ | ೧೩೧ |
| ೧೬ | ಸಹಕಾರಿ ನೂಲಿನ ಗಿರಣಿಗಳು | ೧೧ | ೦ | ೬ | ೧೭ |
| ೧೭ | ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘಗಳು | ೨೨೩ | ೫೫ | ೪೪ | ೩೨೨ |
| ೧೮ | ಲೈವ್ ಸ್ಟಾಕ್ ಸಹಕಾರ ಸಂಘಗಳು | ೩೨೩ | ೮೫ | ೪೨ | ೪೫೦ |
| ೧೯ | ಹಾಲು ಉತ್ಪಾದಕರ ಸಹಕಾರ ಸಂಘಗಳು | ೧೨೯೭೧ | ೫೫೨ | ೪೩೧ | ೧೩೯೫೪ |
| ೨೦ | ಸಹಕಾರ ಹಾಲು ಒಕ್ಕೂಟ | ೧೩ | – | ೨ | ೧೫ |
| ೨೧ | ಸಂಯುಕ್ತ ಬೇಸಾಯ ಸಹಕಾರ ಸಂಘಗಳು | ೫೧ | ೧೦ | ೧೧೨ | ೧೭೩ |
| ೨೨ | ಏತ ನೀರಾವರಿ ಸಹಕಾರ ಸಂಘಗಳು | ೭೯ | ೨೬ | ೩೫ | ೧೪೦ |
| ೨೩ | ನೀರು ಬಳಕೆದಾರರ ಸಹಕಾರ ಸಂಘಗಳು | ೨೬೬೨ | ೧೭೪ | ೩೧ | ೨೮೬೭ |

| | | | | | |
|---|---|---|---|---|---|
| ೨೪ | ಮೀನುಗಾರಿಕಾ ಸಹಕಾರ ಸಂಘಗಳು | ೫೪೬ | ೩೦ | ೨೫ | ೬೦೧ |
| ೨೫ | ನೇಕಾರರ ಸಹಕಾರ ಸಂಘಗಳು | ೬೪೫ | ೯೦ | ೮೮ | ೮೨೩ |
| ೨೬ | ಇತರೆ ಕೈಗಾರಿಕಾ ಸಹಕಾರ ಸಂಘಗಳು | ೧೯೩ | ೬೬ | ೯೩ | ೩೫೨ |
| ೨೭ | ಕೈಗಾರಿಕಾ ಸಹಕಾರ ಸಂಘಗಳು | ೨೯೨ | ೧೧೪ | ೧೯೬ | ೬೦೨ |
| ೨೮ | ಗ್ರಾಹಕರ ಸಹಕಾರ ಸಂಘಗಳು | ೧೧೬೫ | ೧೧೨ | ೧೦೫ | ೧೩೮೨ |
| ೨೯ | ಕೇಂದ್ರ ಸಗಟು ಮಾರಾಟ ಮಳಿಗೆ | ೨೮ | ೦ | ೧೧ | ೩೯ |
| ೩೦ | ಗೃಹ ನಿರ್ಮಾಣ ಸಹಕಾರ ಸಂಘಗಳು | ೧೧೨೨ | ೧೮೩ | ೨೫೦ | ೧೫೫೫ |
| ೩೧ | ಅರಣ್ಯ ಕೂಲಿಕಾರರ ಸಹಕಾರ ಸಂಘಗಳು | ೨೫ | ೧೨ | ೭ | ೪೪ |
| ೩೨ | ಕೂಲಿಕಾರರ ಸಹಕಾರ ಸಂಘಗಳು | ೯೬ | ೪೨ | ೩೪ | ೧೭೨ |
| ೩೩ | ಜಿಲ್ಲಾ ಸಹಕಾರ ಒಕ್ಕೂಟ | ೩೩ | – | ೩ | ೩೬ |
| ೩೪ | ಜಿಲ್ಲಾ ಸಹಕಾರ ಮಹಾಮಂಡಳ | ೮ | – | – | ೮ |
| ೩೫ | ವಿವಿದೋದ್ದೇಶ ಸಹಕಾರ ಸಂಘಗಳು | ೧೮೭೩ | ೧೪೨ | ೭೭ | ೨೦೯೨ |
| ೩೬ | ವಿದ್ಯಾರ್ಥಿ ಗ್ರಾಹಕರ ಸಹಕಾರ ಸಂಘಗಳು | ೧೧೧ | ೧೬ | ೫ | ೧೩೨ |
| ೩೭ | ಮಹಿಳಾ ಸಹಕಾರ ಸಂಘಗಳು | ೧೧೦ | ೩ | ೭ | ೧೨೦ |
| ೩೮ | ಮಹಿಳಾ ವಿವಿದೋದ್ದೇಶ ಸಹಕಾರ ಸಂಘಗಳು | ೧೦೭೫ | ೨೦೭ | ೧೩೨ | ೧೪೧೪ |
| ೩೯ | ಗರೀಬಿ ಹಟಾವೂ ವಿವಿದೋದ್ದೇಶ ಸಹಕಾರ ಸಂಘಗಳು | ೩೩ | ೮ | ೩ | ೪೪ |
| ೪೦ | ದರ್ಜಿಗಳ ವಿವಿದೋದ್ದೇಶ ಸಹಕಾರ ಸಂಘಗಳು | ೧೪ | ೧೧ | ೯ | ೩೪ |
| ೪೧ | ಚರ್ಮಹದ ಮಾಡುವವರ ಸಹಕಾರ ಸಂಘಗಳು | ೨೨ | ೭ | ೨೧ | ೫೦ |
| ೪೨ | ಮರ ಬೆಳೆಗಾರರ ಸಹಕಾರ ಸಂಘಗಳು | ೮ | ೯ | ೪ | ೨೧ |

| | | | | | |
|---|---|---|---|---|---|
| ೪೩ | ಹ್ಯಾಂಡ್ ಪೌಂಡಿಂಗ್ ಸಹಕಾರ ಸಂಘಗಳು | ೧ | – | ೫ | ೬ |
| ೪೪ | ಮಡಿವಾಳ ಸಹಕಾರ ಸಂಘಗಳು | ೫ | ೧ | ೨ | ೮ |
| ೪೫ | ವಿದ್ಯುತ್ ಶಕ್ತಿ ಸಹಕಾರ ಸಂಘಗಳು | ೬ | ೨ | – | ೮ |
| ೪೬ | ಸಾರಿಗೆ ಸಹಕಾರ ಸಂಘಗಳು | ೮ | ೮ | ೩ | ೧೯ |
| ೪೭ | ಸಹಕಾರ ಆಸ್ಪತ್ರೆಗಳು | ೮ | ೨ | ೨ | ೧೨ |
| ೪೮ | ಸಹಕಾರ ಮುದ್ರಣಾಲಯಗಳು | ೧೯ | ೫ | ೬ | ೩೦ |
| ೪೯ | ಉಣ್ಣೇನೇಕಾರರ ಸಹಕಾರ ಸಂಘಗಳು | ೧೬೨ | ೪೨ | ೧೨ | ೨೧೬ |
| ೫೦ | ಇತರೆ ಸಹಕಾರ ಸಂಘಗಳು | ೨೬೧ | ೭೩ | ೫೧ | ೨೮೫ |
| ಒಟ್ಟು | | **೩೩೬೭೭** | **೨೩೭೯** | **೨೩೭೪** | **೩೮೪೩೦** |

ದಿನಾಂಕ : ೩೧/೦೩/೨೦೧೪ ರ ಅಂತ್ಯಕ್ಕೆ ರಾಜ್ಯದಲ್ಲಿ ಸಹಕಾರ ಸಂಘಗಳಲ್ಲಿ ೫೦೨೩ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಕಾರ್ಯನಿರ್ವಹಿಸುತ್ತಿದ್ದು, ನಿಷ್ಕ್ರಿಯಗೊಂಡ ಸಹಕಾರ ಸಂಘಗಳ ಸಂಖ್ಯೆ ೧೭ ಇದ್ದು, ಹಾಗೂ ಸಮಾಪನೆಗೊಂಡ ಸಹಕಾರ ಸಂಘಗಳು ೧೯೬. ಬೆಳಗಾವಿ ಜಿಲ್ಲೆಯಲ್ಲಿ ೯೬೨ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಹಾಗೂ ಗೋಕಾಕ ತಾಲೂಕಿನಲ್ಲಿ ೯೮ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಕಾರ್ಯನಿರ್ವಹಿಸುತ್ತಿವೆ.



ದಿನಾಂಕ ೩೧-೩-೨೦೧೪ಕ್ಕೆ ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾ.ಕೃ.ಪ.ಸ.ಸಂಘಗಳ ಸಂಖ್ಯೆ ೫೦೨೩, ನಿಷ್ಕ್ರಿಯಗೊಂಡ ಪ್ರಾ.ಕೃ.ಪ.ಸ.ಸಂಘಗಳ ಸಂಖ್ಯೆ ೧೭ ಹಾಗೂ ಸಮಾಪನೆಗೊಂಡ ಪ್ರಾ.ಕೃ.ಪ.ಸ.ಸಂಘಗಳ ಸಂಖ್ಯೆ ೧೯೬ ಸಂಘಗಳನ್ನು ತೋರಿಸುವ ವೃತ್ತ ಖಂಡಾಚಿತ್ರ

**೨.೭ ಉಪ ಸಂಹಾರ :**

ಈ ಅಧ್ಯಾಯದಲ್ಲಿ ಸಹಕಾರ ಸಂಘಗಳ ಉಗಮ ಹಾಗೂ ವಿಕಾಸ ಭಾರತ ಮತ್ತು ಕರ್ನಾಟಕದಲ್ಲಿ ಸಹಕಾರ ಸಂಘಗಳ ಬೆಳವಣಿಗೆ ಬೆಳಗಾವಿ ಜಿಲ್ಲೆ ಗೋಕಾಕ ತಾಲೂಕದಲ್ಲಿ ಕಾರ್ಯನಿರ್ವಹಿಸುವ ಸಹಕಾರ ಸಂಘಗಳ ವಿವರವಾದ ವಿಶ್ಲೇಷನೆಯನ್ನು ಮಾಡಲಾಗಿರುತ್ತದೆ.

# ಅಧ್ಯಾಯ - ಮೂರು

## ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ, ಹುಟ್ಟು ಮತ್ತು ವಿಕಾಸ.

೩.೧ ಕಲ್ಲೋಳಿಯ ಭೌಗೋಳಿಕ ಹಿನ್ನೆಲೆ :

೩.೨ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಹುಟ್ಟು ಮತ್ತು ವಿಕಾಸ.

೩.೩ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಂಘದ, ಸ್ಥಾಪನೆ ಮತ್ತು ಆಡಳಿತ ರಚನೆ

೩.೪ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಂಘದ, ಪ್ರಸ್ತುತ ಆಡಳಿತ ಮಂಡಳಿಯ ವಿವರ

೩.೫ ಸಹಕಾರ ಸಂಘದ ಮೂಲ ತತ್ವಗಳು

೩.೬ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಂಘದ, ಆಡಳಿತ ಮಂಡಳಿಯ ಕರ್ತವ್ಯ ಮತ್ತು ಅಧಿಕಾರಗಳು

೩.೬ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಂಘದ, ಸೌಲಭ್ಯಗಳು (ಅಭಿವೃದ್ಧಿ ಕಾರ್ಯಗಳು)

೩.೭ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಂಘದ, ಮಾನವ ಸಂಪನ್ಮೂಲ

# ಅಧ್ಯಾಯ – ಮೂರು

## ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಹುಟ್ಟು ಮತ್ತು ಬೆಳವಣಿಗೆ

### ೩.೧ : ಕಲ್ಲೋಳಿಯ ಭೌಗೋಳಿಕ ಹಿನ್ನೆಲೆ :

**ಪ್ರಸ್ತಾವನೆ :**

ಕಲ್ಲೋಳಿಯ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನಿಂದ ೧೧ ಕಿ.ಮೀ. ದೂರದಲ್ಲಿ[೬] ಘಟಪ್ರಭಾ ನದಿಯನ್ನು ದಾಟಿ ಈಶಾನ್ಯಕ್ಕೆ ಮೂಡಲಗಿ ಮಾರ್ಗವಾಗಿ ಸಾಗಿದರೆ ಈ ಕಲ್ಲೋಳಿ ಗ್ರಾಮ ಸಿಗುತ್ತದೆ. ಕಲ್ಲೋಳಿಯು ೧೫° ೫೯° ಪೂರ್ವ ಅಕ್ಷಾಂಶದಿಂದ ೧೯° ೨೧ ಪಶ್ಚಿಮ ಅಕ್ಷಾಂಶ ಮತ್ತು ೭೪° ೩೭ ರೇಖಾಂಶದಿಂದ ೭೫° ೧೬ ದಕ್ಷಿಣ ರೇಖಾಂಶದಲ್ಲಿದೆ.

ಇಂದ್ರವೇಣಿ ನದಿಯ ತೀರದಲ್ಲಿ ನೆಲೆಸಿರುವ ಕಲ್ಲೋಳಿ, ಚಂದ್ರರೇಖೆಯಂತೆ ಕಂಗೊಳಿಸುತ್ತಿತ್ತು ಎಂದು ಪಾರ್ಶ್ವ ಪಂಡಿತನ ಜೈನ ಬಸದಿಯಲ್ಲಿರುವ ಶಾಸನ ಸಾರಿ ಹೇಳುತ್ತದೆ. ಕಲ್ಲೋಳಿಯು ೩೪೧೮ ಹೆಕ್ಟೇರ್ ಭೂಪ್ರದೇಶವನ್ನು ಹೊಂದಿದ್ದು, ಸಮುದ್ರ ಪಾತಳಿಯಿಂದ ೫೫೩ ಮೀ ಎತ್ತರದಲ್ಲಿದೆ. ಗ್ರಾಮದ ಪೂರ್ವಕ್ಕೆ ನಾಗನೂರ, ಪಶ್ಚಿಮಕ್ಕೆ ರಾಜಾಪೂರ, ಉತ್ತರಕ್ಕೆ ತುಕ್ಕಾನಟ್ಟಿ, ದಕ್ಷಿಣಕ್ಕೆ ಸಂಗನಕೇರಿ, ಪಿ.ಜಿ. ಹುಣಶ್ಯಾಳ ಗ್ರಾಮಗಳನ್ನು ಮೇರೆಗಳನ್ನಾಗಿ ಹೊಂದಿದೆ ವಾಡಿಕೆಯಂತೆ ೩೭ ದಿನಗಳ ಮಳೆ ಬೀಳುತ್ತದೆ. ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ಸುಮಾರು ೪೮೪.೩ ಮಿಲಿ ಮೀಟರ್ ಬೀಳುತ್ತದೆ. ಈ ಪ್ರದೇಶದಲ್ಲಿ ಬೇಸಿಗೆಯಲ್ಲಿ ಉಷ್ಣತೆಯು ಸುಮಾರು ೪೦ ಸೆಂಟಿಗ್ರೇಡ್ ವರೆಗೆ ಇರುತ್ತದೆ. ಡಿಸೆಂಬರ್‌ದಿಂದ ಫೆಬ್ರುವರಿವರೆಗೆ ೨೦ ಸೆಂಟಿಗ್ರೇಡ್ ಉಷ್ಣತೆಯ ಚಳಿಗಾಲ ಇರುತ್ತದೆ.

ಕಲ್ಲೋಳಿ ಜನಸಂಖ್ಯೆಯು ೨೦೧೧ ನೇ ಸಾಲಿನ ಜನಗಣತಿಯ ಪ್ರಕಾರ ಗ್ರಾಮದ ಒಟ್ಟು ಜನಸಂಖ್ಯೆಯು ಸುಮಾರು ೧೯೬೫೦ ಇದೆ. ಇದರಲ್ಲಿ ಪುರುಷರ ಸಂಖ್ಯೆ ೮೬೫೦ ಆದರೆ ಮಹಿಳೆಯರ ಸಂಖ್ಯೆ ೮೩೫೦ ಇದ್ದು, ೩೫೫೦ ಕುಟುಂಬಗಳು ಇದ್ದು ವ್ಯವಸಾಯ ಕೇಂದ್ರಿತವಾಗಿದೆ. ೩೪೧೮ ಹೆಕ್ಟೇರ್ ಭೂ ಪ್ರದೇಶವನ್ನು ಸಾಗುವಳಿಗಾಗಿ

---

೬ : ಗ್ರಾಮ ಲೆಕ್ಕಾಧಿಕಾರಿ ಕಲ್ಲೋಳಿ

ಉಪಯೋಗಿಸಲಾಗುತ್ತಿದೆ. ಇಲ್ಲಿಯ ಭೂಮಿ ಕಪ್ಪು ಎರಿ ಮಣ್ಣು ಮತ್ತು ಗರಸು ಮಿಶ್ರಿತ ಭೂಮಿಯಾಗಿರುತ್ತದೆ.

ಆಹಾರ ಧಾನ್ಯಗಳು : ಗೋವಿನ ಜೋಳ, ಜೋಳ, ಗೋದಿ, ಜವೆಗೋದಿ, ಕಡಲಿ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತದೆ.

ವಾಣಿಜ್ಯ ಬೆಳೆಗಳು : ಕಬ್ಬು, ಅರಿಶಿಣ, ಹತ್ತಿ, ಸೂರ್ಯಪಾನ, ಸೊಯಾಬಿನ್, ಬಾಳೆ ಮುಂತಾದವುಗಳು.

ನೀರಿನ ಮೂಲಗಳು: ಇಂದ್ರವೇಣಿ ನದಿ (ಹಳ್ಳ) ಘಟಪ್ರಭಾ ನದಿಯ ಎಡದಂಡೆ ಕಾಲುವೆ, ಬಾಂವಿ, ಕೊಳವೆಬಾಂವಿ ಮುಂತಾದವು ನೀರಿನ ಮೂಲಗಳಿವೆ.

ವಾತಾವರಣವು ಋತುಮಾನದ ಅನುಗುಣವಾಗಿ ಬದಲಾವಣೆ ಹೊಂದುತ್ತದೆ. ಇದರ ಒಟ್ಟು ಭೂ ಪ್ರದೇಶದಲ್ಲಿ ೮೨ ಹೆಕ್ಟೇರ್ ಪ್ರದೇಶದಲ್ಲಿ ಜೋಳ, ೨೦ ಹೆಕ್ಟೇರ್ ಸಜ್ಜಿ, ೧೦೮ ಹೆಕ್ಟೇರ್ ಗೋದಿ, ೧೨೯ ಹೆಕ್ಟೇರ್ ಗೋವಿನಜೋಳ, ೩೭ ಹೆಕ್ಟೇರ್ ಶೇಂಗಾ, ೧೫೨೦ ಹೆಕ್ಟೇರ್ ಕಬ್ಬು, ೫ ಹೆಕ್ಟೇರ್ ಹತ್ತಿ, ೧೦ ಹೆಕ್ಟೇರ್ ಅರಿಶಿಣ, ೬ ಹೆಕ್ಟೇರ್ ಬಾಳೆ, ೩೫ ಹೆಕ್ಟೇರ್ ಏಕದಳ ಧಾನ್ಯ, ೧೦೫ ಹೆಕ್ಟೇರ್ ದ್ವಿದಳ ಧಾನ್ಯಗಳನ್ನು ಬೆಳೆಯಲಾಗುತ್ತದೆ.

**೩.೨ : ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಹುಟ್ಟು ಮತ್ತು ವಿಕಾಸ :**

ದಿನಾಂಕ ೫ ಮೇ ೧೯೧೩ ನೇಯ ಶುಭ ದಿನವನ್ನು ಕಲ್ಲೋಳಿಯ ಇತಿಹಾಸದಲ್ಲಿ[೭] ಸುವರ್ಣಾಕ್ಷರಗಳಲ್ಲಿ ಬರೆದಿಡುವ ಘಟನೆಯಾಗಿದೆ. ಏಕೆಂದರೆ ಇಂದ್ರವೇಣಿ ನದಿಯ ದಂಡೆಯ ಮೇಲಿರುವ ಕಲ್ಲೋಳಿ ಗ್ರಾಮದಲ್ಲಿ ಕ್ರೀಯಾಶೀಲ ತರುಣರು ಮತ್ತು ಮುತ್ಸದಿ ಸಹಕಾರಿ ಯೋದರು ಸ್ವಯಂ ಪ್ರೇರಿತವಾಗಿ ಕೂಡಿಕೊಂಡು ಶ್ರೀ ಸಿದ್ದನಗೌಡ ಪಾಟೀಲ ಅವರ ಪ್ರೇರಣೆಯಿಂದ ಶ್ರೀ ಪರಪ್ಪ ವೀರಪ್ಪ ಪಾಟೀಲ ಅವರು ಕಲ್ಲೋಳಿ ಗ್ರಾಮದ ಶ್ರೀ ಆಂಜನೇಯ ದೇವರ ಸಾನಿದ್ಯ ಸ್ಥಳದಲ್ಲಿ **'ದಿ ಕಲ್ಲೋಳಿ ಅಗ್ರಿಕಲ್ಚರ್ ಕೋ ಆಪ್‌ರೇಟಿವ್ ಕ್ರೆಡಿಟ್ ಸೋಸಾಯಿಟಿ ನಿಯಮಿತ'** ಅಂತಾ ಈ ಸಂಘವನ್ನು ಸ್ಥಾಪನೆ ಮಾಡಿದರು.

ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಬೆಳಗಾವಿ ಜಿಲ್ಲೆಯ ಸಹಕಾರಿ ಕ್ಷೇತ್ರದಲ್ಲೇ ಹಿರಿಯ ಸ್ಥಾನದಲ್ಲಿರುವ ಉತ್ತಮವಾಗಿ ಕಾರ್ಯನಿರ್ವಹಣೆ ಹೊಂದಿದ್ದು, ಅಲ್ಲದೇ

---

೭ : 'ಸಹಕಾರ ಪ್ರಭೆ' ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ. ಶತಮಾನೋತ್ಸವದ ಸ್ಮರಣ ಸಂಚಿಕೆ ೨೦೧೪. ಪು.ಸಂ.೧೦೪. ೧೦೫

ಶತಮಾನೋತ್ಸವ ಆಚರಿಸಿಕೊಂಡಿದೆ. ಭಾರತದ ಇತಿಹಾಸ ಪುಟಗಳನ್ನು ತಿರುವಿನೋಡಿದರೆ ಹತ್ತೊಂಬತ್ತನೆಯ ಶತಮಾನದ ಅಡಿಯಲ್ಲಿ ಅಂದರೆ ಜಾಗತಿಕ ಮಟ್ಟದಲ್ಲಿ ಸುವರ್ಣ ಪ್ರಮಿತಿ ರೂಢಿಯಲ್ಲಿ ಅಥವಾ ಜಾರಿಯಲ್ಲಿದ್ದ ಕಾಲವಾಗಿದೆ. ಈ ಅವಧಿಯಲ್ಲಿ ಒಕ್ಕಲುತನ ಕುಟುಂಬಗಳ ಆರ್ಥಿಕ ಸ್ಥಿತಿ ಚಿಂತಾಜಕವಾಗಿತ್ತು. ವ್ಯವಸಾಯವೇ ಮುಖ್ಯ ಉದ್ಯೋಗವಾಗಿತ್ತು.

ಅಲ್ಲದೇ ಜನರ ಅಜ್ಞಾನ ಹಾಗೂ ಮೂಢನಂಬಿಕೆ ಬಡತನದ ಕಾರಣದಿಂದ ಒಕ್ಕಲುತನದಲ್ಲಿ ಸುಧಾರಣೆಯನ್ನು ಕಂಡುಕೊಳ್ಳಲಾಗದ ಸ್ಥಿತಿ ಇತ್ತು. ಅಂದರೆ ರೈತಾಪಿ ವರ್ಗದ ಆರ್ಥಿಕ ಸ್ಥಿತಿ ಕಳವಳಕಾರಕವಾಗಿತ್ತು. ದಿನೇದಿನಾ ದೇಶದ ಜನಸಂಖ್ಯೆ ಹೆಚ್ಚಾಗುತ್ತ ಹೋದಂತೆ ರೈತಾಪಿ ವರ್ಗದವರು ಶ್ರೀಮಂತರಿಂದ ಅಧಿಕ ಬಡ್ಡಿದರದಿಂದ ಸಾಲವನ್ನು ಪಡೆದು ಆ ಸಾಲದಲ್ಲಿಯೇ ಕಾಲ ಕಳೆಯುವುದು ಕೂಡ ದುಸ್ತರವಾಯಿತು.

ಇದೇ ಸಮಯದಲ್ಲಿ ಸ್ವಾತಂತ್ರ್ಯ ಹೋರಾಟವೂ ಪ್ರಾರಂಭವಾದ ಕಾರಣ ಬ್ರಿಟಿಷ್ ಸರಕಾರವು ದೇಶದಲ್ಲಿ ಶಾಂತಿಯನ್ನು ಪುನರ್ ಸ್ಥಾಪಿಸಲು ಸಹಕಾರವೇ ಮಾಧ್ಯಮವೆಂದು ಮನಗಂಡು ೧೯೦೪ ರಲ್ಲಿ ಸಹಕಾರಿ ಪತ್ತಿನ ಸಂಘಗಳ ಕಾಯ್ದೆಯನ್ನು ಜಾರಿಗೆ ತಂದರು. ಈ ಕಾಯ್ದೆಯ ಪ್ರಕಾರ ರೈತರಿಗೆ ಸಿಗಬಹುದಾದ ಆರ್ಥಿಕ ಸವಲತ್ತುಗಳು ಮತ್ತು ಅವಕಾಶಗಳು ಪರಿಮಿತವಾಗಿದ್ದವು. ಈ ಕಾಯ್ದೆಯ ಪ್ರಕಾರ ಭಾರತದ ಕರ್ನಾಟಕ ರಾಜ್ಯದ ಗದಗ ಜಿಲ್ಲೆಯ ಕಣಗಿನಹಾಳದಲ್ಲಿ ಶ್ರೀ ಸಿದ್ದನಗೌಡ ಪಾಟೀಲ ಅವರು ಪ್ರಥಮ ಸಹಕಾರಿ ಸಂಘವನ್ನು ಸ್ಥಾಪಿಸಿ ಸಹಕಾರಿ ಪಿತಾಮಹರಾದರು.

ಮುಂದೆ ಕೆಲವೇ ಅವಧಿಯಲ್ಲಿಯೇ ಬ್ರಿಟೀಷ್ ಸರಕಾರ ೧೯೧೨ ರಲ್ಲಿ ಆಲ್ ಇಂಡಿಯಾ ಕೋ ಆಪರೇಟಿವ್ ಸೊಸಾಯಿಟಿಜ್ ಕಾಯ್ದೆ ನಂ.೨ ಆಫ್ ೧೯೧೨ ಎಂಬ ಸಹಕಾರಿ ಕಾಯ್ದೆಯನ್ನು ಪಾಸು ಮಾಡಿತು. ೧೯೦೪ ರ ಕಾಯ್ದೆಯಲ್ಲಿ ಅನೇಕ ನ್ಯೂನ್ಯಗಳಿದ್ದವು ಆ ನ್ಯೂನ್ಯತೆಗಳನ್ನು ತೆಗೆದು ಹಾಕಿ ತಿದ್ದುಪಡಿಗಳನ್ನು ಮಾಡಿ ೧೯೧೨ ರ ಕಾಯ್ದೆಯಲ್ಲಿ ರೈತರಿಗೆ ಆರ್ಥಿಕವಾಗಿ ಅನುಕೂಲತೆಗಳನ್ನು ಸೇರಿಸಿ ಅನೇಕ ಸುಧಾರಣೆಗಳನ್ನು ಮಾಡಲಾಯಿತು. ಒಟ್ಟಿನಲ್ಲಿ ಈ ಕಾಯ್ದೆಯು ರೈತರಿಗೆ ಹೆಚ್ಚಿನ ಅವಕಾಶಗಳಿಗೆ ಮಾರ್ಗ ಮಾಡಿಕೊಡುವುದರ ಮೂಲಕ ಕಲ್ಲೋಳಿಯಲ್ಲಿ ಸಹಕಾರಿ ಸಂಘದ ಸ್ಥಾಪನೆಗೆ ಅನುಕೂಲವಾಯಿತು.

ಸಹಕಾರಿ ಪಿತಾಮಹ ಶ್ರೀ ಸಿದ್ದನಗೌಢ ಪಾಟೀಲ ಅವರ ಪ್ರೇರಣೆಯಿಂದ ಕಲ್ಲೋಳಿಯ ಹಿರಿಯ ಸಹಕಾರಿ ಮುತ್ಸದ್ದಿಗಳಾದ ಶ್ರೀ ಪರಪ್ಪ ವೀರಪ್ಪ ಪಾಟೀಲ ಅವರ ನೇತೃತ್ವದಲ್ಲಿ ಕಲ್ಲೋಳಿ ಗ್ರಾಮದ ರೈತಾಪಿ ವರ್ಗದ ಆರ್ಥಿಕ ಸಮಸ್ಯೆಗಳಿಗೆ ಪರಿಹಾರ ಕಾರ್ಯಗಳನ್ನು ಕೈಗೊಳ್ಳಲು ೧೯೧೩ ನೇ ಮೇ.೫ ರಂದು ಮುಂಬೈ ರಾಜ್ಯದ ಸಹಕಾರಿ

ಸಂಘಗಳ ರಜಿಸ್ಟಾರ್‌ರಿಂದ ಈ ಕಲ್ಲೋಳಿಯ ಸಹಕಾರಿ ಸಂಘ ನೊಂದಾಯಿಸಲ್ಪಟ್ಟಿತು. ಇದರ ರಜಿಸ್ಟರ್ ನಂಬರ **೫೮೨** ಇದ್ದು ಇದು ಈಗ ರೈತರ ಆರ್ಥಿಕ ಸಮಸ್ಯೆಗಳ ನಿವಾರಣೆಯ ಕೇಂದ್ರವಾಗಿದೆ. ಅಲ್ಲದೇ ರೈತರ ಕೃಷಿ ಚಟುವಟಿಕೆಗಳಿಗೆ ಈ ಸಂಘದಿಂದ ಅಗತ್ಯ ಆರ್ಥಿಕ ಸವಲತ್ತುಗಳನ್ನು ನೀಡುವ ಆಶಾಕಿರಣವಾಗಿ ಬೆಳೆಯತೊಡಗಿತು.

ಪ್ರಾರಂಭದಲ್ಲಿ ಈ ಸಹಕಾರಿ ಸಂಘದ ಸದಸ್ಯರ ಸಂಖ್ಯೆಯ ೨೫ ಇದ್ದು ಸದಸ್ಯರು ಈ ಸಂಘದಿಂದ ತಮ್ಮ ಒಕ್ಕಲುತನ ಅಥವಾ ಕೃಷಿ ಚಟುವಟಿಕೆಯ ಉಪಯೋಗಕ್ಕಾಗಿ ಸಾಲಗಳನ್ನು ಪಡೆಯುತ್ತಿದ್ದರು. ನಂತರ ದಿನಾಂಕ : ೦೭/೦೪/೧೯೨೧ ಮೊದಲಿನ ಪೋಟ ನಿಯಮಗಳಲ್ಲಿಯ ನ್ಯೂನ್ಯತೆಗಳನ್ನು ನಿವಾರಿಸಿ ಕೆಲವೊಂದು ಮಾರ್ಪಾಡುಗಳಾದವು. ಸನ್ ೧೯೩೧ ನೇ ಸಪ್ಟೆಂಬರ್ ೩ ರಂದು ಮೊದಲಿನ ಪೋಟ ನಿಯಮಗಳ ಬದಲಿಗೆ ಹೊಸ ಪೋಟ ನಿಯಮ "ಅ" ಸ್ವೀಕರಿಸಲಾಯಿತು. ಈ ಹೊಸ ಪೋಟ ನಿಯಮಗಳ ಪ್ರಕಾರ ಈ ಸಂಘದ ಸದಸ್ಯರು ಉಳಿತಾಯದ ಸಲುವಾಗಿ ಚಿಕ್ಕ ಚಿಕ್ಕ ಠೇವುಗಳನ್ನು ಈ ಸಂಘದಲ್ಲಿ ಠೇವಣಿ ಇಡಲಿಕ್ಕೆ ಹತ್ತಿದರು. ಸನ್ ೧೯೩೪ ನೇ ಫೆಬ್ರುವರಿ ೨೬ ಕ್ಕೆ ಪೋಟ ನಿಯಮ "ಅ" ನ್ನು ಮತ್ತಷ್ಟು ಸುಧಾರಣೆ ಮಾಡಿತು. ಈ ಪೋಟ ನಿಯಮದ ಪ್ರಕಾರ ಪ್ರತಿಯೊಬ್ಬ ಸಂಘದ ಸದಸ್ಯನು ಶೇರು ಧಾರಣ ಮಾಡಬೇಕಾಯಿತು. ಆಗ ಪ್ರತಿಯೊಂದು ಶೇರನ ಬೆಲೆಯು ೫ ರೂ. ಇದ್ದು ೨೦೦/- ರೂಪಾಯಿಗಳ ವರೆಗೆ ಶೇರನ ಧಾರಣ ಮಾಡಲು ಅವಕಾಶ ಕಲ್ಪಿಸಲಾಯಿತು. ಸಾಲದ ಮರ್ಯಾದೆಯು ಸಣ್ಣ ಮುದ್ದತಿಯು ಅಂದರೆ ಒಕ್ಕಲುತನ ಉಪಯೋಗಕ್ಕಾಗಿ ೩೦೦/- ರೂಪಾಯಿಗಳ ವರೆಗೆ ಹಾಗೂ ದೊಡ್ಡ ಮುದ್ದತಿಯವು ಅಂದರೆ ಒಕ್ಕಲುತನ ಕಾಮಗಾರಿಗಳಾಗಿ ೬೦೦/- ರೂಪಾಯಿಗಳ ವರೆಗೆ ಇತ್ತು. ಅಂದರೆ ಪ್ರಾರಂಭದಲ್ಲಿ ೧೯೩೪-೩೫ ರಿಂದ ಶೇರು ಧಾರಣ ಮಾಡುವ ಕೆಲಸ ಪ್ರಾರಂಭವಾಯಿತು. ಆಗ ಇದ್ದ ೧೧೦ ಸದಸ್ಯರಿಂದ ೬೩೫ ರೂಪಾಯಿಗಳು ಶೇರು ಬಂಡವಾಳ ಜಮಾ ಆಯಿತು.

ಬ್ರಿಟಿಷ್ ಸರಕಾರ ೨೧-೦೯-೧೯೩೯ ರಲ್ಲಿ ಹಳೆಯ ಪೋಟ ನಿಯಮದಲ್ಲಿ ಕೆಲವು ನ್ಯೂನ್ಯತೆಗಳನ್ನು ನಿವಾರಿಸಿ ಹೊಸ ಪೋಟ ನಿಯಮ "ಅ೩" ಯನ್ನು ಸ್ವೀಕರಿಸಿ ಸಂಘದ ಹೆಸರನ್ನು ಬದಲಾಯಿಸಿತು. ಅಂದರೆ 'ದಿ ಕಲ್ಲೋಳಿ ಶೇತ್ಕಿ ಪತ್ತು ಮತ್ತು ಮಿತವ್ಯಯ ಬೆಳೆಯಿಸುವ ಸಹಕಾರಿ ಸಂಘ ಅನಿಯಮಿತ' ಎಂದು ಹೆಸರಾಯಿತು. ಕೆಲವು ವರ್ಷದ ನಂತರ ದಿನಾಂಕ : ೩೧.೦೪.೧೯೪೯ ರಲ್ಲಿ ಹಳೆಯ ಪೋಟ ನಿಯಮಗಳಲ್ಲಿರುವ ಕೆಲವು ನ್ಯೂನ್ಯತೆಗಳನ್ನು ನಿವಾರಿಸಿ ರೈತರಿಗೆ ಅನುಕೂಲವಾಗುವ ಹಲವಾರು ತಿದ್ದುಪಡಿಗಳನ್ನು ಮಾಡಿ ಸಂಘದ ಹೆಸರನ್ನು **'ದಿ ಕಲ್ಲೋಳಿ ವಿವಿಧ ಉದ್ದೇಶಗಳ ಸಹಕಾರಿ ಸಂಘ ನಿಯಮಿತ'**

ಬದಲಾಯಿತು. ನಂತರ ರೈತ ಸದಸ್ಯರ ಸಂಖ್ಯೆ ಕಡಿಮೆಯಾದ್ದರಿಂದ ಸನ್ ೧೯೫೮ ಫೆಬ್ರುವರಿ ೧೭ ರಂದು ಹಳೆಯ ಪೋಟ ನಿಯಮಗಳನ್ನು ತಿದ್ದುಪಡಿ ಮಾಡಿ ಈ ಹೊಸ ಪೋಟ ನಿಯಮಗಳ ಪ್ರಕಾರ ಪ್ರತಿಯೊಂದು ಕುಟುಂಬದವರು ಸದಸ್ಯರಾಗಲಿಕ್ಕೆ ಅವಕಾಶ ಕಲ್ಪಿಸಲಾಯಿತು. ಇದರಿಂದ ಸದಸ್ಯರ ಸಂಖ್ಯೆಯಲ್ಲಿ ಹೆಚ್ಚಳವಾಯಿತು. ಆಗ ಈ ಸಂಘವು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿ ತನ್ನ ಸದಸ್ಯರ ಆರ್ಥಿಕ ಬೆಳವಣಿಗೆಗೆ ವಿವಿಧ ಪ್ರಕಾರ ಸವಲತ್ತುಗಳನ್ನು ಒದಗಿಸಿ ಗ್ರಾಮದ ಕಲ್ಪವೃಕ್ಷವೆನಿಸಿತು. ಮುಂದೆ ಈ ಸಂಘದಲ್ಲಿ ರೈತ ಸದಸ್ಯರ ಸಂಖ್ಯೆ ಬೆಳೆದು ಈ ಸದಸ್ಯರಿಗೆ ಸಾಕಷ್ಟು ಪ್ರಮಾಣದಲ್ಲಿ ಸಾಲದ ಸೌಲಭ್ಯಗಳನ್ನು ವಿತರಿಸಲಾಯಿತು.

ಮತ್ತೇ ಕೆಲವೇ ದಿನಗಳಲ್ಲಿ ೨೬/೦೨/೧೯೫೮ ರಲ್ಲಿ ಈ ಪೋಟ ನಿಯಮಗಳನ್ನು ತಿದ್ದುಪಡಿ ಮಾಡಿ ಈ ಸಂಘದ ಹೆಸರನ್ನು **"ದಿ ಕಲ್ಲೋಳಿ ದೊಡ್ಡ ಪ್ರಮಾಣದ ವಿವಿಧ ಉದ್ದೇಶಗಳ ಸಹಕಾರಿ ಸಂಘ ನಿಯಮಿತ"** ಎಂದು ಬದಲಾಯಿಸಲಾಯಿತು. ಕಾಲಕ್ರಮೇಣ ಸಂಘವು ಅಭಿವೃದ್ಧಿ ಹೊಂದುತ್ತ ರೈತಾಪಿ ವರ್ಗಕ್ಕೆ ಅನೇಕ ಸವಲತ್ತುಗಳನ್ನು ಒದಗಿಸುವುದರಿಂದ ಕಲ್ಲೋಳಿಯ ಈ ಸಹಕಾರಿ ಸಂಘವು ಹೆಮ್ಮರವಾಗಿ ಬೆಳೆಯಿತು. ಕೆಲವು ವರ್ಷಗಳ ನಂತರ ಮುಂದೆ ದಿನಾಂಕ : ೧೨/೧೧/೧೯೯೭ ರಲ್ಲಿ ಕರ್ನಾಟಕ ಸರಕಾರವು ಸಹಕಾರಿ ನಿಯಮಗಳ ಪ್ರಕಾರ ಕಾಯ್ದೆ ಕಲಂ ೧೦/೨ ರನ್ವಯ ಈ ಸಂಘದ ಹೆಸರನ್ನು **'ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಬ್ಯಾಂಕ್'** ಎಂದು ಬದಲಾಯಿಸಲಾಯಿತು. ನಂತರ ಕರ್ನಾಟಕ ಸರಕಾರ ಸಹಕಾರಿ ನಿಯಮಗಳಿಗೆ ತಿದ್ದುಪಡಿಯ ದಿನಾಂಕ ; ೩೦/೦೪/೨೦೧೦ ರಲ್ಲಿ ಈ ಸಂಘದ ಹೆಸರನ್ನು **ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ** ನಿ, ಎಂದು ಮತ್ತೆ ಮಾರ್ಪಡಿಸಲಾಯಿತು. ಈ ಸಂಘವು ಅಭಿವೃದ್ಧಿ ಹೊಂದುತ್ತ (೧೯೧೩-೨೦೧೪) ಶತಮಾನೋತ್ಸವ ಆಚರಿಸಿಕೊಂಡು ಸಂಭ್ರಮದಲ್ಲಿ ತೇಲಾಡಿತು. ಅಲ್ಲದೇ ೧೦೩ ನೇ ವರ್ಷದಲ್ಲಿ ಪಾದಾರ್ಪಣೆಯ ಜೊತೆಗೆ ರೈತಾಪಿ ವರ್ಗದ ಸದಸ್ಯರಿಗೆ ಅನೇಕ ಆರ್ಥಿಕ ಸೌಲಭ್ಯಗಳನ್ನು ಹಂಚುತ್ತ ಬೆಳಗಾವಿ ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ ಸಹಕಾರಿ ಸಂಘಗಳ ಪೈಕಿ ಇದು ಒಂದಾಗಿದೆ.

## ೩. ೩ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಆಡಳಿತದ ರಚನೆ :




ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಕಾರ್ಯಾಲಯದ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಆಡಳಿತ ಮಂಡಳಿಯವರಿಗೆ ಆಪ್ತ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಇವರ ಅರ್ಹತೆ, ಅನುಭವ ಪಾರದಕ್ಷತೆ, ವ್ಯವಹಾರಿಕ ಜ್ಞಾನದಿಂದ ಮತ್ತು ಕಾರ್ಯದಕ್ಷತೆಯ ಲಾಭದಿಂದಾಗಿ ಮಹತ್ತರವಾದ ಆರ್ಥಿಕ ಪ್ರಗತಿ ಸಾಧಿಸುತ್ತಿದೆ. ಎಲ್ಲ ಸಿಬ್ಬಂದಿ ಮತ್ತು ಅಧಿಕಾರಿಗಳು ತಮ್ಮ ಕಾರ್ಯಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿರುತ್ತಾರೆ. ಆದರೆ ಬಡತನ ರೇಖೆಯ ಕೆಳಗೆ ಜೀವಿಸುವುದರ ಶೇರು ಹಣವನ್ನು ಸರಕಾರವೇ ಭರಿಸುವುದರಿಂದ ಸದಸ್ಯರ ಸಂಖ್ಯೆ ಹೆಚ್ಚಾಗಿ ಕಾರ್ಯಾಲಯದ ಕಾರ್ಯವೈಖರಿಯ ಮೇಲೆ ಪರಿಣಾಮವನ್ನು ಬೀರಬಹುದು. ಆದ್ದರಿಂದ ಸದಸ್ಯರ ಸಂಖ್ಯೆ ಹೆಚ್ಚಾದಂತೆ ಕಾರ್ಯಭಾರ ಕಡಿಮೆ ಮಾಡಲು

ಯೋಗ್ಯ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವುದರಿಂದ ಈ ಸಹಕಾರಿ ಸಂಘದ ಆರ್ಥಿಕ ಅಭಿವೃದ್ಧಿ ಸಾಧಿಸಲು ಸಾಧ್ಯವಾಗುತ್ತದೆ.

**೩.೪) ಪ್ರಸ್ತುತ ಆಡಳಿತ ಮಂಡಳಿ :**

| ಅ.ನಂ. | ಹೆಸರು | ಹುದ್ದೆ |
|---|---|---|
| ೧ | ಶ್ರೀ ಬಾಳಪ್ಪ ಬಸಪ್ಪ ಬೆಳಕೂಡ | ಅಧ್ಯಕ್ಷರು |
| ೨ | ಶ್ರೀಮತಿ ದ್ರಾಕ್ಷಾಯಣಿ ಪ್ರಕಾಶ ಕುರಬೇಟ | ಉಪಾಧ್ಯಕ್ಷರು |
| ೩ | ಶ್ರೀ ಭೀಮಪ್ಪ ಸತ್ತೆಪ್ಪ ಕಡಾಡಿ | ನಿರ್ದೇಶಕರು |
| | ಶ್ರೀ ಪರಪ್ಪ ನಿಂಗಪ್ಪ ಪಾಟೀಲ | ನಿರ್ದೇಶಕರು |
| ೫ | ಶ್ರೀ ಮಲ್ಲಪ್ಪ ಬಸಪ್ಪ ಬೆಳಕೂಡ | ನಿರ್ದೇಶಕರು |
| ೬ | ಶ್ರೀ ವಸಂತ ಮಾರುತಿ ತಹಶೀಲ್ದಾರ | ನಿರ್ದೇಶಕರು |
| ೭ | ಶ್ರೀ ಮಹಾದೇವ ತುಕಾರಾಮ ಮುಸಗುಪ್ಪಿ | ನಿರ್ದೇಶಕರು |
| ೮ | ಶ್ರೀಮತಿ ಸಿದ್ದವ್ವ ಬಸವಣ್ಣೆಪ್ಪ ಗೋರೋಶಿ | ನಿರ್ದೇಶಕರು |
| ೯ | ಶ್ರೀಮತಿ ಶಾಂತವ್ವ ಪರಪ್ಪ ಕಡಾಡಿ | ನಿರ್ದೇಶಕರು |
| ೧೦ | ಶ್ರೀ ಯಮನಪ್ಪ ಗೋಕಾವಿ | ನಿರ್ದೇಶಕರು |
| ಮೆ॥ ಬ್ಯಾಂಕ್ ನಿರೀಕ್ಷಕರು ಹೆಚ್ಚುವರಿ ವಿಭಾಗ ಮೂಡಲಗಿ | | |

೩.೫) ಈ ಸಹಕಾರಿ ಸಂಘದ ಮೂಲತತ್ವಗಳು :

- **ಸ್ವ ಇಚ್ಛೆ ಮತ್ತು ಮುಕ್ತ ಸದಸ್ಯತ್ವ :**

  ಸಹಕಾರಿ ಸಂಸ್ಥೆಗಳು ಸ್ವ ಇಚ್ಛೆಯಿಂದ ಸ್ಥಾಪಿಸಿದ ಸಂಸ್ಥೆಗಳಾಗಿದ್ದು ಲಿಂಗ ಭೇದ, ಸಾಮಾಜಿಕ ಸ್ಥಾನಮಾನ, ವರ್ಣೀಯ, ರಾಜಕೀಯ, ಅಥವಾ ಧಾರ್ಮಿಕ ಭಾವನೆಗಳ ಆಧಾರದ ಮೇಲೆ ಅಲ್ಲದೆ, ಜವಾಬ್ದಾರಿಗಳನ್ನು ನಿರ್ವಹಿಸುವ ಮತ್ತು ತಮ್ಮ ಸಾಮರ್ಥ್ಯವನ್ನು ಉಪಯೋಗಿಸಿಕೊಳ್ಳಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳಿಗೆ ಅದರ ಸದಸ್ಯತ್ವದ ಅವಕಾಶವಿರುತ್ತದೆ.

- **ಪ್ರಜಾಪ್ರಭುತ್ವ ತಳಹದಿಯ ಸದಸ್ಯರ ನಿಯಂತ್ರಣ**

  ಸಹಕಾರಿ ಸಂಸ್ಥೆಗಳು ಪ್ರಜಾ ಪ್ರಭುತ್ವ ತಳಹದಿಯ ಮೇಲೆ ಸ್ಥಾಪಿಸಲಾದ ಸಂಸ್ಥೆಗಳಾಗಿದ್ದು, ಅದರ ಸದಸ್ಯರ ನಿಯಂತ್ರಣಕ್ಕೊಳಪಟ್ಟಿರುತ್ತದೆ. ಸದಸ್ಯರು ಸಂಸ್ಥೆಯ ಕಾರ್ಯನೀತಿಯನ್ನು ರೂಪಿಸುವಲ್ಲಿ ಮತ್ತು ತೀರ್ಮಾನಗಳನ್ನು ಕೈಗೊಳ್ಳವಲ್ಲಿ ಭಾಗವಹಿಸುತ್ತಾರೆ. ಈ ಸಂಸ್ಥೆಗಳ ಚುನಾಯುತ ಪ್ರತಿನಿಧಿಗಳು ಸದಸ್ಯರಿಗೆ ಜವಾಬ್ದಾರರಾಗಿರುತ್ತಾರೆ.

- **ಸದಸ್ಯರ ಆರ್ಥಿಕ ಪಾಲ್ಗೋಳ್ಳುವಿಕೆ:**

  ಸಹಕಾರಿ ಸಂಸ್ಥೆಗಳ ಬಂಡವಾಳಕ್ಕೆ ಸದಸ್ಯರು ಸಮಾನವಾಗಿ ಹೂಡಿಕೆ ಮಾಡುವುದಲ್ಲದೆ, ಅದರ ಹೊಣೆಗಾರಿಕೆಯನ್ನು ಪ್ರಜಾಪ್ರಭುತ್ವದ ತಳಹದಿಯ ಮೇಲೆ ಸಮಾನವಾಗಿ ನಿರ್ವಹಿಸುತ್ತಾರೆ. ಆರ್ಥಿಕ ಚಟುವಟಿಕೆಗಳ ಮೇಲೆ ಬರುವ ಹೆಚ್ಚುವರಿ ಲಾಭಾಂಶವು ಸಹಕಾರಿ ಸಂಸ್ಥೆಗಳ ಒಡೆತನಕ್ಕೆ ಸೇರುತ್ತದೆ. ಉಳಿದಂತೆ ಸದಸ್ಯರ ಹೂಡಿಕೆಗಳನ್ನು ಗೌಣವಾಗಿ ಉಪಯೋಗಿಸಿಕೊಳ್ಳಲಾಗುವುದು.

- **ಸ್ವಾಯತ್ತತೆ ಮತ್ತು ಸ್ವಾತಂತ್ರ್ಯ :**

  ಸಹಕಾರಿ ಸಂಸ್ಥೆಗಳು ಸ್ವಸಹಾಯಕ್ಕಾಗಿ ಸ್ಥಾಪಿತವಾದ ಸ್ವಾಯತ್ತ ಸಂಸ್ಥೆಗಳಾಗಿದ್ದು ಅವುಗಳ ಸದಸ್ಯರಿಂದ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಸಹಕಾರಿ ಸಂಸ್ಥೆಗಳು ಇತರೆ ಸಂಸ್ಥೆಗಳೊಂದಿಗೆ, ಸರ್ಕಾರದೊದಿಂಗೆ ಒಪ್ಪಂದ ಮಾಡಿ ಕೊಂಡಾಗ ಅಥವಾ ಹೊರಗಿನಿಂದ ಬಂಡವಾಳವನನ್ನು ಕ್ರೋಢೀಕರಿಸುವಾಗ ಅವುಗಳು ಸದಸ್ಯರು ಪ್ರಜಾಪ್ರಭುತ್ವದ ತಳಹದಿಯ ಹತೋಟಿ ಮತ್ತು ಸ್ವಾಯತ್ತತೆಗೆ ಧಕ್ಕೆ ಬರದಂತೆ ನಿರ್ವಹಿಸಲಾಗುತ್ತದೆ.

- **ಶಿಕ್ಷಣ ತರಬೇತಿ ಮತ್ತು ಮಾಹಿತಿ :**

ಸಹಕಾರಿ ಸಂಸ್ಥೆಗಳ ತಮ್ಮ ಸದಸ್ಯರಿಗೆ ಚುನಾಯಿತ ಪ್ರತಿನಿಧಿಗಳಿಗೆ ಮತ್ತು ಸಿಬದಿಗೆ ಸಂಸ್ಥೆಯ ಅಭಿವೃದ್ಧಿ ಕಾರ್ಯದಲ್ಲಿ ಪಾಲ್ಗೊಳ್ಳಲು ಅನುವಾಗುವಂತೆ ಶಿಕ್ಷಣ ಮತ್ತು ತರಭೇತಿಯನ್ನು ನೀಡುತ್ತವೆ. ಸಹಕಾರ ತತ್ವಗಳ ಆದರೆ ಉಪಯೋಗದ ಬಗ್ಗೆ ಸಾಮಾನ್ಯ ಜನರಲ್ಲಿ ಅದರಲ್ಲೂ ವಿಶೇಷವಾಗಿ ಯುವ ಜನತೆ ಮತ್ತು ನಾಯಕರಲ್ಲಿ ಅರಿವನ್ನು ಮೂಡಿಸಲು ಸಹ ಕ್ರಮ ಕೈಗೊಳ್ಳತ್ತದೆ.

- **ಸಹಕಾರಿ ಸಂಸ್ಥೆಗಳ ನಡುವೆ ಸಹಕಾರ :**

ಸಹಕಾರಿ ಸಂಸ್ಥೆಗಳ ತಮ್ಮ ಸದಸ್ಯರ ಅಭಿವೃದ್ಧಿಗಾಗಿ ಸೇವೆ ಮೂಲಕ ಪರಿಣಾಕಾರಿಯಾಗಿ ಶ್ರಮಿಸುತ್ತುದ್ದು, ಸ್ಥಳೀಯ, ಪ್ರಾದೇಶಿಕ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಜೊತೆಯಾಗಿ ಕಾರ್ಯ ನಿರ್ವಹಿಸುವ ಮೂಲಕ ಸಹಕಾರಿ ಚಳುವಳಿಯನ್ನು ಬಲಪಡಿಸುತ್ತವೆ.

- **ಸಹಕಾರಿಗಳ ಸಾಮಾಜಿಕ ಕಳಕಳ :**

ಸಹಕಾರಿಗಳು ತಮ್ಮ ಸಮುದಾಯಗಳ ಸುಸ್ಥಿರ ಅಭಿವೃದ್ಧಿಗಾಗಿ ತಮ್ಮ ಸದಸ್ಯರು ಒಪ್ಪಿರುವ ನೀತಿಗಳನ್ವಯ ಕಾರ್ಯನಿರ್ವಹಿಸುತ್ತವೆ.

**೩.೬) ಕಲ್ಲೋಳಿ ಪ್ರಾ.ಕೃ.ಪ.ಸ. ಸಂಘದ ಆಡಳಿತ ಮಂಡಳಿಯ ಕರ್ತವ್ಯ ಮತ್ತು ಅಧಿಕಾರಗಳು :**

ಸಂಘದ ಆಡಳಿತ ಸಮಿತಿಯು ಕರ್ತವ್ಯ ಮತ್ತು ಅಧಿಕಾರಗಳು ಈ ಕೆಳಗಿನಂತಿವೆ ಅವು.[೮]

೧ ಸದಸ್ಯತ್ವಕ್ಕೆ ಬಂದ ಅರ್ಜಿಗಳನ್ನು ವಿಲೇವಾರಿ ಮಾಡುವುದು.

೨ ಸಂಘವನ್ನು ನಡೆಸಲು ಅವಶ್ಯಕವಾಗಿ ಬೇಕಾದ ಹಣವನ್ನು ರಾಷ್ಟ್ರೀಯ ಬ್ಯಾಂಕಿನ ಮಾರ್ಗಸೂಚಿಗಳು ಏನಾದರೂ ಇದ್ದರೆ ಅವುಗಳಂತೆ, ಠೇವಣಾತೀತ ಮತ್ತು ಸಾಲಗಳ ಮೂಲಕ ಹಣಕಾಸನ್ನು ಪಡೆಯುವುದು. ಅವುಗಳ ಮೇಲೆ ಬಡ್ಡಿದರ ನಿಗದಿ ಮಾಡುವುದು.

೩ ಸದಸ್ಯರುಗಳಿಂದ ಬಂದ ಸಾಲದ ಅರ್ಜಿಗಳನ್ನು ಪರಿಶೀಲಿಸಿ ರಾಷ್ಟ್ರೀಯ ಬ್ಯಾಂಕಿನ ಮಾರ್ಗಸೂಚಗಳು ಏನಾದರೂ ಇದ್ದರೆ ಅವುಗಳಂತೆ, ಸಾಲಗಳನ್ನು ಮಂಜೂರು ಮಾಡುವುದು ಮತ್ತು ಕಾಲಕಾಲಕ್ಕೆ ಬಡ್ಡಿದರ ನಿರ್ಧರಿಸುವುದು.

---

೮ ಃ ಪ್ರಾಥಮಿಕ ಕೃಷಿ ಸಂಘ ನಿ. ಇದರ ಉಪವಿಧಿಗಳು, ಬೆಳಗಾವಿ ಜಿಲ್ಲಾ ಸಹಕಾರಿ ಯುನಿಯನ್ ನಿಯಮಿತ-೧೫೦-ಬಾಂದೂರ ಗಲ್ಲಿ, ಬೆಳಗಾವಿ ಪುಟ ಸಂ. ೨೬.೨೭.

೪ ರಾಷ್ಟ್ರೀಯ ಬ್ಯಾಂಕಿನ ಮಾರ್ಗಸೂಚಿಗಳು ಏನಾದರೂ ಇದ್ದರೆ ಅವುಗಳಂತೆ, ಸದಸ್ಯರುಗಳಿಗೆ ಹೈನದ ದನಗಳನ್ನು ಸಾಲ ಕೊಡುವುದು.

೫ ಸಾಲದ ವಿನಿಯೋಗವನ್ನು ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವುದು. ಸಾಲವನ್ನು ವಾಪಸ್ಸು ಪಡೆಯುವುದು ಅಥವಾ ಸೂಕ್ತ ಕಂಡಲ್ಲಿ ವಾಯಿದೆ ಹೆಚ್ಚಿಸುವುದು.

೬ ಸದಸ್ಯರ ಶೇರು ದರಖಾಸ್ತುಗಳನ್ನು ಮಂಜೂರು ಮಾಡುವುದು. ಮತ್ತು ಶೇರು ಹಂಚುವುದು ಹಾಗೂ ವರ್ಗಾವಣೆ ಮಾಡುವುದು.

೭ ಸದಸ್ಯರುಗಳಿಗೆ ಬೇಕಾದ ಬೀಜದ ತಳಿಗಳು, ಮೇವು ವಗೈರೆಗಳನ್ನು ಒಟ್ಟಾಗಿ ಕೊಂಡು ಮಾರುವುದು.

೮ ಸಂಘದ ಅಭಿವೃದ್ಧಿಗೆ ಅವಶ್ಯಕವಾಗಿ ಬೇಕಾದ ಕಟ್ಟಡಗಳನ್ನು ಕಟ್ಟಿಸುವುದು, ಬಾಡಿಗೆಗೆ ಪಡೆಯುವುದು, ರಿಪೇರಿ ಮಾಡುವುದು.

೯ ಸಂಘದ ಕಾರ್ಯವ್ಯಾಪ್ತಿಯಲ್ಲಿ ಮಾರಾಟಾ ವ್ಯವಹಾರ ಮಳಿಗೆಗಳನ್ನು ತೆರೆಯುವುದು.

೧೦ ವಾರ್ಷಿಕ ಸರ್ವ ಸದಸ್ಯರ ಮಹಾಸಭೆ ಮತ್ತು ವಿಶೇಷ ಸರ್ವ ಸದಸ್ಯರ ಮಹಾಸಭೆಗಳನ್ನು ಕರೆಯುವುದು. ಆಡಳಿತ ಸಮಿತಿಯ ಚುನಾವಣೆಗೆ ವ್ಯವಸ್ಥೆ ಮಾಡುವುದು.

೧೧ ಸಂಘವನ್ನು ತನ್ನ ಲೆಕ್ಕ ಪತ್ರಗಳನ್ನು ಸಹಕಾರ ಲೆಕ್ಕಪತ್ರಗಳ ಪರಿಶೋಧನಾ ನಿರ್ದೇಶಕರಿಂದ ಅಥವಾ ಅವರಿಂದ ಅಧಿಕೃತವಾದ ವ್ಯಕ್ತಿಯಿಂದ ಕನಿಷ್ಠ ಪಕ್ಷ ವರ್ಷಕ್ಕೊಮ್ಮೆ ಮಾಡಿಸಿಕೊಳ್ಳುವುದು ವ್ಯವಸ್ಥೆ ಮಾಡಿಕೊಳ್ಳುವುದು.

೧೨ ಲೆಕ್ಕ ತಪಾಸಣಾ ವರದಿ ರಾಷ್ಟ್ರೀಯ ಬ್ಯಾಂಕಿನ ವರದಿ ಇಲಾಖೆಯವರು ತನಿಖಾ ವರದಿ ಹಾಗೂ ಸಂಘಕ್ಕೆ ಹಣ ಪೂರೈಸುವ ಬ್ಯಾಂಕಿನ ಅಥವಾ ಸಂಸ್ಥೆಯ ತನಿಖೆಗಳ ವರದಿಗಳನ್ನು ಸೂಕ್ತ ಸಮಜಾಯಿಸಿಯೊಂದಿಗೆ ಸರ್ವ ಸದಸ್ಯರ ಸಭೆಗೆ ತರುವುದು.

೧೩ ರಾಷ್ಟ್ರೀಯ ಬ್ಯಾಂಕಿನ ಮಾರ್ಗಸೂಚಿಗಳು ಏನಾದರೂ ಇದ್ದರೆ ಅವುಗಳಂತೆ, ಸಾಲಗಳು, ಕೂಡಿಕೆಗಳು ಇದರ ಹೆಚ್ಚುವರಿ ನಿಧಿಗಳನ್ನು ಠೇವು ಮಾಡುವುದು ಮತ್ತು ಇತರ ವ್ಯವಹಾರಗಳ ಬಗ್ಗೆ ಕ್ರಮ ಕೈಗೊಳ್ಳುವುದು.

೧೪ ವ್ಯಾಪಾರ ಅಭಿವೃದ್ಧಿಯ ಯೋಜನೆಯ ಪ್ರಗತಿಯನ್ನು ಪ್ರತಿತಿಂಗಳು ಪರಿಶೀಲಿಸುವುದು. ನೀಡಿದ ಗುರಿ, ಸಾಧನೆ, ಕೊರತೆ ಕಂಡುಹಿಡಿಯುವುದು.

೧೫ ನೌಕರರ ವಯಕ್ತಿಕ ನೀತಿಗಳು, ನೇಮನೂಕಿ, ಮುಂಬಡ್ತಿ, ಸಿಬ್ಬಂದಿ ತರಬೇತಿ, ವರ್ಗಾವಣೆ, ಸಂಬಂಧಿಸಿದ ವಿವಾದಾಂಶಗಳನ್ನೊಳಗೊಂಡು ಮತ್ತು ಸಂಘದ ವ್ಯವಹಾರಗಳ ಅಗತ್ಯಗಳ ಅನುಸಾರ ಪರಿಹಾರಗಳ ಕುರಿತು ಕ್ರಮ ಕೈಗೊಳ್ಳುವುದು.

೧೬ ಸಂಕಷ್ಟ ಪ್ರಸಂಗದಲ್ಲಿ ವೇತನ ನೀಡಿಕೆ ಸ್ಥಗಿತಗೊಳಿಸುವುದು, ವೇತನದಲ್ಲಿ ಕಡಿತ ಮಾಡುವುದು.

೧೭ ಸಂಘದ ಕೆಲಸದಲ್ಲಿ ಸಹಾಯ ಮಾಡುವುದು.

೧೮ ಪ್ರತಿ ಸಾಲಿನ ಜಮಾ–ಖರ್ಚು ಅಂದಾಜು ಪಟ್ಟಿಯಲ್ಲಿ ಪರಿಶೀಲಿಸುವುದು. ಸರ್ವ ಸದಸ್ಯರು ಮಹಾಸಭೆಯ ಮಂಜೂರಾತಿಗೆ ಇಡುವುದು.

೧೯ ಸರ್ವ ಸದಸ್ಯರ ಮಹಾಸಭೆಯ ಮಂಜೂರಾತಿ ಪಡೆದ ಖರ್ಚಿನ ಪರಿಮಿತಿಗೊಳಪಟ್ಟು ಸಿಬ್ಬಂದಿ ನೇಮಕ ಮಾಡುವುದು. ಮತ್ತು ಅವರ ವೇತನ ಶ್ರೇಣಿಗಳನ್ನು ಆಗಾಗ್ಗೆ ಗೊತ್ತುಪಡಿಸುವುದು. ಹಾಗೂ ಅವರ ಸೇವಾ ನಿಯಮಗಳನ್ನು ನಿರ್ಧರಿಸುವುದು.

೨೦ ಸರ್ವ ಸದಸ್ಯರ ಮಹಾಸಭೆಯ ಮಂಜೂರಾತಿ ಪಡೆದ ಹಣದ ಪರಿಮಿತಿಗೊಳಪಟ್ಟು ಸಂಘವನ್ನು ನಡೆಸಲು ಅಗತ್ಯವಾದ ಖರ್ಚುಗಳನ್ನು ಮಾಡುವುದು.

೨೧ ಸಿಬ್ಬಂದಿಯ ಭವಿಷ್ಯ ನಿಧಿ, ಉಪದಾನ ನಿಧಿ ಹಾಗೂ ಸೇವಾ ನಿಯಮಗಳನ್ನು ತಯಾರಿಸಿ, ಅನುಮೋದನೆ ನೀಡುವುದು.

೨೨ ಸಂಘದ ಉದ್ದೇಶಗಳಿಗಣುಸಾರವಾಗಿ ವಿಶೇಷ ಕಾರ್ಯಕ್ರಮಗಳನ್ನು ಕೈಗೊಳ್ಳಲು ಉಪಸಮಿತಿಗಳನ್ನು ನೇಮಿಸಬಹುದು.

೨೩ ಸಂಘದ ಸಿಬ್ಬಂದಿ ವರ್ಗದವರಿಂದ ಅವರವರ ಕಾರ್ಯಕ್ರಮಕ್ಕನುಗುಣವಾಗಿ ಸೂಕ್ತ ಭದ್ರತೆ ಮತ್ತು ಠೇವಣಿಗಳನ್ನು ಗೊತ್ತುಪಡಿಸುವುದು.

೨೪ ಸಂಘದ ಉದ್ದೇಶಕ್ಕನುಸರಿಸಿ ಸಂಘದ ಏಳ್ಗೆಗಾಗಿ ಅಗತ್ಯವಾದ ಮತ್ತು ಪೂರಕವಾದ ಎಲ್ಲ ಕಾರ್ಯಕ್ರಮಗಳನ್ನು ಕೈಗೊಳ್ಳುವುದು.

೨೫ ಸಂಘವು ಸದಸ್ಯತ್ವ ಹೊಂದಿದ ಸಂಘ–ಸಂಸ್ಥೆಗಳಲ್ಲಿ ತನ್ನ ಪ್ರತಿನಿಧಿಯಾಗಿ ಭಾಗವಹಿಸಲು ಒಬ್ಬ ಸಮಿತಿ ಸದಸ್ಯನನ್ನು ಆಯ್ಕೆ ಮಾಡಿ ಕಳುಹಿಸುವುದು.

೨೬ ಮುಖ್ಯ ಕಾರ್ಯನಿರ್ವಾಹಕ ಸ್ಥಾನವು ಖಾಲಿಯಾದ ಸಂದರ್ಭದಲ್ಲಿ ಸೂಕ್ತ ವ್ಯವಸ್ಥೆಯನ್ನು ಮಾಡುವುದು.

**ಅಧ್ಯಕ್ಷರ ಅಧಿಕಾರ ಮತ್ತು ಕಾರ್ಯಗಳು :**

೧. ಸಂಘದ ಸಾಮಾನ್ಯ ಆಡಳಿತದ ನಿಯಂತ್ರಣ, ಮತ್ತು ಮೇಲ್ವಿಚಾರಣೆ ಮಾಡುವುದು.

೨. ಆಡಳಿತ ಸಮಿತಿಯ ಮತ್ತು ಸರ್ವ ಸದಸ್ಯರ ಸಭೆಗಳ ಅಧ್ಯಕ್ಷತೆವಹಿಸುವುದು.

೩. ಸಭೆಯನ್ನು ಮುಂದೂಡುವುದು. ಮತ್ತು ಅಂತಹ ಸಭೆಯಲ್ಲಿ ನಿರ್ಧಾರಕ ಮತ ನೀಡುವುದು.

೪. ಠರಾವು ಪುಸ್ತಕಕ್ಕೆ ಸಹಿ ಮಾಡುವುದು.

೫. ಸಮಿತಿಯ ನಿರ್ದೇಶನದಂತೆ ಸಂಘದ ಹಿತದೃಷ್ಟಿಯಿಂದ ಅವಶ್ಯಕವಾದ ವ್ಯವಹಾರಗಳನ್ನು ನಡೆಸುವುದು.

೬. ಸಂಘದ ಮುಖ್ಯ ಕಾರ್ಯನಿರ್ವಾಹಕನ ಮೇಲೆ ಮೇಲ್ವಿಚಾರಣೆ ಇಟ್ಟುಕೊಳ್ಳುವುದು.

**೩.೭) ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸೌಲಭ್ಯಗಳು : (ಅಭಿವೃದ್ಧಿ ಕಾರ್ಯಗಳು)**

ಈ ಸಂಘವು ತನ್ನ ಕಾರ್ಯಗಳನ್ನು ವ್ಯವಸ್ಥಿತವಾಗಿ ನಡೆಯುವಂತೆ ಮಾಡಲು ಅವಿರತ ಪ್ರಯತ್ನಗಳು ನಡೆದಿವೆ. ರೈತಾಪಿ ಸದಸ್ಯರ ಎಲ್ಲ ಸಮಸ್ಯೆಗಳನ್ನು ಯೋಜನಾ ಬದ್ಧವಾಗಿ ಪರಿಹಾರ ಕೈಗೊಳ್ಳಲಾಗುತ್ತಿದೆ. ಆಡಳಿತದಲ್ಲಿ ಬಲವರ್ಧನೆ ಮತ್ತು ಪತ್ತಿನ ಸಾಮರ್ಥ್ಯ ಹೆಚ್ಚಿಸುವುದನ್ನು ಆದ್ಯತೆ ಕೊಡಲಾಗಿದೆ. ರೈತ ಸದಸ್ಯರಿಗೆ ವಿವಿಧ ಮೂಲ ಸೌಲಭ್ಯಗಳನ್ನು ಪೂರೈಸುವ ಪ್ರಯತ್ನಗಳು ನಡೆದಿರುತ್ತವೆ.

ಒಂದು ಪ್ರಾಥಮಿಕ ಸಹಕಾರಿ ಸಂಘ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಲು ವಿಸ್ತಾರವಾದ ಆವರಣವಿರಬೇಕು. ರಸ್ತೆಗಳು ದಾಸ್ತಾನು ಮಳಿಗೆಗಳಿರಬೇಕು. ಹೆಚ್ಚಿನ ಸಂಖ್ಯೆಯಲ್ಲಿ ರೈತರು ಎಲ್ಲ ಸೌಲಭ್ಯಗಳನ್ನು ಪಡೆಯಲು ನಿರತರಾಗಿರಬೇಕು. ಅಂದರೆ ರೈತಾಪಿ ಸದಸ್ಯರ ಮೂಲ ಉದ್ದೇಶಗಳನ್ನು ಆರ್ಥಿಕ ಧೋರಣೆಗಳನ್ನು ಗಮನದಲ್ಲಿಟ್ಟುಕೊಂಡು ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದಲ್ಲಿ ವಿವಿಧ ಆರ್ಥಿಕ ಸೌಲಭ್ಯಗಳನ್ನು ಅವಶ್ಯಕತೆಗೆ ಅನುಗುಣವಾಗಿ ಪೂರೈಸುತ್ತಾ ಬಂದಿದೆ. ಈ ವಿಶೇಷ ಮತ್ತು ಸೌಕರ್ಯಗಳು ಇಂತಿವೆ.

**ಸಹಕಾರಿ ಸಂಘದ ಆವರಣ.**

ಸಹಕಾರಿ ಸಂಘದ ವಾರ್ಷಿಕ ಸಭೆಗಳು ಬಂದಾಗ ರೈತರಿಗೆ ಅನುಕೂಲವಾಗಲು ಕಾರ್ಯಗಳು ಒಂದು ನಿರ್ದಿಷ್ಟ ಆವರಣದಲ್ಲಿ ನಡೆಯಬೇಕು, ವಿಶಾಲವಾಗಿರಬೇಕು ಮತ್ತು ಊರ ಹತ್ತಿರದಲ್ಲಿರಬೇಕು. ಅದಕ್ಕೆ ಸುತ್ತಲೂ ಗೋಡೆಯನ್ನು ನಿರ್ಮಿಸಲಾಗಿದೆ. ಆವರಣದ ರಕ್ಷಣೆಗಾಗಿ ಮುಖ್ಯದ್ವಾರ ನಿರ್ಮಿಸಿ ರೈತರ ವಾಹನಗಳು ಮೇಲೆ ನಿಗಾವಹಿಸಲು

ಅನುಕೂಲವಾಗುವಂತೆ ಸುಮಾರು ೩೫ ಗುಂಟೆ ಪ್ರದೇಶದಲ್ಲಿ ಈ ಸಹಕಾರಿ ಸಂಘದ ಸ್ಥಳದಲ್ಲಿ ಆವರಣವಿರುತ್ತದೆ. ಈ ಆವರಣದಲ್ಲಿ ಮೆಣಸಿನಕಾಯಿ ಒಣಗಿಸಲು ಅನುಕೂಲಕರವಾಗಿರುತ್ತದೆ.

**ಸಹಕಾರಿ ಸಂಘದ ಪ್ರಾಂಗಣ.**

ಸಹಕಾರಿ ಸಂಘದ ಆವರಣದಲ್ಲಿ ವಿವಿದ ಕಾರ್ಯಗಳು ಅಂದರೆ ಸಾಲದ ಸೌಲಭ್ಯಕ್ಕಾಗಿ ಬಂದ ರೈತ ಸದಸ್ಯರಿಗೆ ಅನುಕೂಲವಾಗುವಂತಹ ಪ್ರಾಂಗಣ ಏದೆ. ರೈತರು ವಿಶ್ರಾಂತಿ ಪಡೆದು ಸಾಲ ತೆಗೆದುಕೊಳ್ಳುದಾಗಲೀ ಅಥವಾ ಮರುಪಾವತಿಯಾಗಲೀ ಮಾಡಬಹುದು.

**ಕಟ್ಟೆಗಳು.**

ರೈತರು ತಮ್ಮ ಕೆಲಸದ ಬಿಡುವಿನ ಸಮಯದಲ್ಲಿ ಈ ಸಹಕಾರಿ ಸಂಘದ ಮುಖ್ಯದ್ವಾರದ ಎರಡು ಬದಿಗೆ ಕಟ್ಟೆಗಳನ್ನು ಕಟ್ಟಲಾಗಿದೆ. ರೈತರು ಸಾಯಂಕಾಲದ ಸಮಯದಲ್ಲಿ ಇಲ್ಲಿ ವಿಶ್ರಾಂತಿ ಪಡೆಯಬಹುದಾಗಿದೆ.

**ವಿಶಾಲವಾದ ರಸ್ತೆ.**

ಈ ಪ್ರಾಥಮಿಕ ಕೃಷಿ ಸಹಕಾರಿ ಸಂಘವು ವಿಜಯಪೂರ ಮತ್ತು ಬೆಳಗಾವಿಯ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುತ್ತದೆ. ರೈತರಿಗೆ ತಮ್ಮ ವಾಹನಗಳಲ್ಲಿ ಮತ್ತು ಚಕ್ಕಡಿಗಳಲ್ಲಿ ರಾಸಾಯನಿಕ ಗೊಬ್ಬರವನ್ನು ಹೇರಿಕೊಂಡು ಹೋಗಲು ಮತ್ತು ಹೇರಲು ಸುಲಭವಾಗಿದೆ ರಸ್ತೆ ವಿಶಾಲವಿರುವಾದರಿಂದ ಸಂಚಾರಿ ದಟ್ಟನೆಯ ಅವಘಡಗಳು ನಡೆಯದಂತೆ ರಸ್ತೆಗೆ ಹೊಂದಿಕೊಂಡಿರುತ್ತದೆ.

**ಒಳಚರಂಡಿಯ ವ್ಯವಸ್ಥೆ.**

ಗ್ರಾಮದ ಮಲೀನ ನೀರು ಹರಿದು ಹೋಗಲು ವಾಣಿಜ್ಯ ಕಟ್ಟಡದ ಮುಂದೆ ಒಳಚರಂಡಿಯನ್ನು ವ್ಯವಸ್ಥಿತವಾಗಿ ನಿರ್ಮಿಸಿ ಸ್ವಚ್ಚತೆ ಮತ್ತು ನೈರ್ಮಲ್ಯವನ್ನು ಕಾಪಾಡಲಾಗಿದೆ.

**ಪಡಿತರ ಪದ್ಧತಿ.**

ಆರ್ಥಿಕವಾಗಿ ಹಿಂದುಳಿದ ಕುಟುಂಬಗಳಿಗೆ ಮತ್ತು ಬಡತನ ರೇಖೆಯ ಮೇಲ್ಗಡೆ ಇರುವ ಕುಟುಂಬಗಳಿಗೆ ಆರ್ಥಿಕವಾಗಿ ಅನುಕೂಲವಾಗಲೆಂದು ಒಂದು ನ್ಯಾಯಬೆಲೆಯ ಅಂಗಡಿಯ ಸೌಲಭ್ಯವಿರುತ್ತದೆ. ನ್ಯಾಯ ಬೆಲೆಯ ಮೂಲಕ ಸಕ್ಕರೆ ಸೀಮೆ ಎಣ್ಣೆ ಆಹಾರಧಾನ್ಯಗಳನ್ನು ಒದಗಿಸಲಾಗುತ್ತದೆ. ಹಾಗೂ ಒಂದು ಬಟ್ಟೆ ಅಂಗಡಿ ಇದ್ದು, ಅದರ ಮೂಲಕ ಯೋಗ್ಯ ಬೆಲೆಗೆ ಬಟ್ಟೆ ಮಾರಾಟ ಮಾಡಲಾಗುತ್ತಿತ್ತು. ರೈತಾಪಿ ಸದಸ್ಯರಿಗೆ ಕೃಷಿಗೆ

ಬೇಕಾಗುವ ಸೌಕರ್ಯಗಳನ್ನು ಸುಧಾರಿಸಿದ ಬೀಜಗಳನ್ನು, ರಾಸಾಯನಿಕ ಗೊಬ್ಬರಗಳು, ಮತ್ತು ಸ್ಪ್ರೇಪಂಪುಗಳನ್ನು ಒದಗಿಸಲಾಗುತ್ತಿವೆ. ಅಲ್ಲದೆ ಸದಸ್ಯರಿಗೆ ಬೇಕಾಗುವ ದಿನಬಳಿಕೆಯ ವಸ್ತುಗಳನ್ನು ಸರಕಾರದ ಆದೇಶದ ಪ್ರಕಾರ ಮಾರಾಟ ಮಾಡಲಾಗುತ್ತದೆ. ಪಡಿತರ ಪದ್ಧತಿಯ ವ್ಯವಹಾರದಿಂದ ೨೦೧೩-೧೪ ರಲ್ಲಿ ೬೬೮೫೧ ರೂ. ಲಾಭ ಬಂದಿರುತ್ತದೆ.

**ಕಟ್ಟಡಗಳು.**

೨೦೦ ಟನ್ ಸಾಮರ್ಥ್ಯ ರಾಸಾಯನಿಕ ಗೊಬ್ಬರ ಅಥವಾ ಆಹಾರಧಾನ್ಯಗಳನ್ನು ಸಂಗ್ರಹಸಡಲು ೧೯೫೬ ರಲ್ಲಿ ಒಂದು ದಾಸ್ತಾನು ಮಳಿಗೆಯನ್ನು ನಿರ್ಮಿಸಲಾಗಿದೆ. ಹಾಗೂ ೧೯೬೯ ರಲ್ಲಿ ೨೦೦ ಟನ್ ಸಾಮರ್ಥ್ಯ ರಾಸಾಯನಿಕ ಗೊಬ್ಬರ ಅಥವಾ ಪಡಿತರ ಧಾನ್ಯಗಳನ್ನು ಸಂಗ್ರಹಿಸಡಲು ಶ್ರೀ ಬ.ಸಾ.ಖಾನಾಪೂರ ಅವರ ಅಮೃತ ಹಸ್ತದಿಂದ ನಿರ್ಮಿಸಲಾಗಿದೆ. ರಾಸಾಯನಿಕ ಗೊಬ್ಬರ ಸಂಗ್ರಹಸಿಟ್ಟು ರೈತರಿಗೆ ಸಕಾಲದಲ್ಲಿ ಪೂರೈಸುವ ಸೌಲಭ್ಯ ಕಲ್ಪಿಸಿಲಾಗಿದೆ.

(೧೯೬೨ ರಲ್ಲಿ ಸಹಕಾರಿ ಸಂಘದ ಕಾರ್ಯಲಯದ ಕಟ್ಟಡ ನಿರ್ಮಿಸಲಾಗಿದೆ ನಂತರ ೧೯೭೫-೭೬ ರಲ್ಲಿ ಸಂಘದ ಕಾರ್ಯಕಲಾಪಗಳನ್ನು ನಡೆಸಲು ಹೊಸ ಮಾದರಿಯಲ್ಲಿ ಕಛೇರಿ ಕಟ್ಟಡವನ್ನು ನಿರ್ಮಿಸಲಾಗಿದೆ ೨೦ ಲಕ್ಷ ರೂಗಳ ವೆಚ್ಚದಲ್ಲಿ ನವೀಕರಣಗೊಳಿಸಲಾಗಿದೆ. ಈ ಸೌಕರ್ಯವನ್ನು ರೈತರಿಗೆ ಒದಗಿಸಲಾಗಿದೆ.

**ವಿಶೇಷ ಸೌಲಭ್ಯಗಳು.**

ಈ ಸಹಕಾರಿ ಸಂಘವು ರೈತ ಶೇರುದಾರರಿಗೆ ಪ್ರತಿಶತ ೫ ರಂತೆ ಲಾಭಾಂಶವನ್ನು ಹಂಚಲಾಗುತ್ತದೆ. ರೈತ ಕುಟುಂಬಗಳು ಆರ್ಥಿಕವಾಗಿ ಹಿಂದೂಳಿದವರು ಹರಿಜನರು, ಗಿರಿಜನರು, ರೈತ ಕೂಲಕಾರರು ಮುಂತಾದವರಿಗೆ ಸದಸ್ಯತ್ವ ನೀಡಿ ಆರ್ಥಿಕ ಚಟುವಟಿಕೆ ಕೈಗೊಳ್ಳಲು ಪತ್ತಿನ ಸೌಲಭ್ಯ ಕಲ್ಪಸಲಾಗಿದೆ.

**ಆಧುನಿಕ ಸಲಕರಣಗಳ ಸೌಲಭ್ಯ.**

ಪ್ರಗತಿಪರ ಸಣ್ಣ ರೈತರಿಗೆ ದಿನಾಂಕ : ೦೪-೦೨-೨೦೧೦ ರಂದು ಆಧುನಿಕ ಬೇಸಾಯ ಕೈಗೊಳ್ಳಲು ೩೩ ಟ್ರ್ಯಾಕ್ಟರಗಳನ್ನು ಪ್ರತಿಶತ ೩ ರ ಬಡ್ಡಿದರದಲ್ಲಿ ಒದಗಿಸಲಾಗಿದೆ. ಇನ್ನೂ ಅನೇಕ ಆಧುನಿಕ ಬೇಸಾಯಕ್ಕೆ ಬೇಕಾಗುವ ಯಂತ್ರೋಪಕರಣಗಳನ್ನು ಒದಗಿಸಲು ಈ ಸಹಕಾರ ಸಂಘದ ಆಡಳಿತ ಮಂಡಳಿ ಚಿಂತನೆ ನಡೆಸಿದೆ.

**ವಾಣಿಜ್ಯ ಮಳಿಗೆಗಳ ಸೌಲಭ್ಯ.**

ಸ್ಥಳೀಯ ವಾರದ ಸಂತೆಯು ಪ್ರತಿ ಶನಿವಾರ ನಡೆಯುತ್ತದೆ. ಈ ಸಹಕಾರಿ ಸಂಘವು ದಿನಾಂಕ ೧೫-೫-೧೯೯೪ ರಲ್ಲಿ ಹೆದ್ದಾರಿಗೆ ಹೊಂದಿಕೊಂಡು ೯ ವಾಣಿಜ್ಯ ಮಳಿಗೆಗಳನ್ನು ನಿರ್ಮಿಸಲಾಗಿದೆ. ಇವುಗಳ ಉದ್ಘಾಟನೆಗೆ ಕೇಂದ್ರ ಯೋಜನಾ ಆಯೋಗದ ಮಾಜಿ ಉಪಾಧ್ಯಕ್ಷ ಹಾಗೂ ಮಾಜಿ ಮುಖ್ಯ ಮಂತ್ರಿ ಶಾಮಕೃಷ್ಣ ಹೆಗಡೆ ಆಗಮಿಸಿದ್ದರು. ಮತ್ತು ಮಾಜಿ ವಿಧಾನಸಭೆಯ ಮಾಜಿ ಸಭಾಪತಿ ವ್ಹಿ.ಎಸ್. ಕೌಜಲಗಿ ಅಧ್ಯಕ್ಷತೆ ವಹಿಸಿದ್ದರು. ಈ ವಾಣಿಜ್ಯ ಮಳಿಗೆಗಳನ್ನು ಸಿಮೆಂಟ್ ವ್ಯಾಪಾರಸ್ಥರಿಗೆ, ಕಿರಾಣಿ ವ್ಯಾಪಾರಸ್ಥರಿಗೆ, ಸರ್ಕಾರೇತರ ಹಣಕಾಸಿನ ಸಂಸ್ಥೆಗಳಿಗೆ, ಕಬ್ಬಿಣ ವ್ಯಾಪಾರಸ್ಥರಿಗೆ, ವಿದ್ಯುತ್ ಸಲಕರಣಗಳ ವ್ಯಾಪಾರಸ್ಥರಿಗೆ, ಮತ್ತು ಕಾಳಿನ ವ್ಯಾಪಾರಸ್ಥರಿಗೆ, ಬಾಡಿಗೆ ಕೊಡವುದರ ಮೂಲಕ ಈ ವಾಣಿಜ್ಯ ಮಳಿಗೆಗಳ ಸೌಲಭ್ಯಗಳನ್ನು ಸಣ್ಣ ವ್ಯಾಪಾರಸ್ಥರಿಗೆ ಒದಗಿಸಿ, ಆರ್ಥಿಕವಾಗಿ ವ್ಯಾಪಾರ ಅಭಿವೃದ್ಧಿಗೆ ಅನುಕೂಲ ಕಲ್ಪಿಸಲಾಗಿದೆ. ಇದರಿಂದ ಎಲ್ಲ ವ್ಯಾಪಾರಸ್ಥರ ಮತ್ತು ಕೂಲಿಕಾರ್ಮಿಕರ ಆರ್ಥಿಕ ಪ್ರಗತಿಗೆ ಅನುಕೂಲಕರವಾಗಿರುತ್ತದೆ.

**ಮಲ್ಲಶಾಲೆ.**

ಈ ಆಧುನಿಕ ಕ್ರೀಢೆಗಳ ಬರಾಟೆಯಲ್ಲಿ ಭಾರತೀಯ ಕ್ರೀಡೆಗಳು ಅವನತಿ ಹೊಂಬಾರದೆಂದು ೧೯೫೫-೫೬ ರಲ್ಲಿ ಹುಕ್ಕೇರಿ-ಗೋಕಾಕ ಸಮಾಜ ವಿಕಾಶ ಯೋಜನೆಯಲ್ಲಿ, ಕಲ್ಲೋಳಿ ಗ್ರಾಮ ಪಂಚಾಯತಿಯ ಮಲ್ಲಶಾಲೆ (ಕುಸ್ತಿ ಆಟ) ಯನ್ನು ಈ ಸಂಘದ ಆವರಣದಲ್ಲಿ ಕಟ್ಟಲಾಗಿದೆ. ಈ ಮಲ್ಲಶಾಲೆ (ಗರಡಿಮನೆ) ಯಲ್ಲಿ ಚಿಂತಾಮನಿ, ಹಣಮಂತ ದಾಸರ ಹಣಮಂತ ಮಾಯಾನ್ನವರ ಮತ್ತು ಲಕ್ಷ್ಮಣ ಉಮರಾಣಿ ಮುಂತಾದ ಕುಸ್ತಿ ಪಟುಗಳು ರಾಜ್ಯದಲ್ಲಿ ಪ್ರಸಿದ್ಧರಾದವರು. ಅಲ್ಲದೇ ಮಲ್ಲಶಾಲೆಯಲ್ಲಿ ಪಳಗಿದ ಅನೇಕ ವಿದ್ಯಾರ್ಥಿಗಳು ಸೈನಿಕರಾಗಿ ದೇಶ ಸೇವೆಯನ್ನು ಮಾಡುತ್ತಿದ್ದಾರೆ. ಹೀಗೆ ಸಹಕಾರಿ ಸಂಘವು ಕ್ರೀಡೆ, ಸಂಸ್ಕೃತಿಗೆ ಮತ್ತು ಶಿಕ್ಷಣ ಕ್ಷೇತ್ರಕ್ಕೆ ಪ್ರೋತ್ಸಾಹ ನೀಡಿ ಅನೇಕ ಸೌಲಭ್ಯಗಳನ್ನು ಒದಗಿಸುತ್ತಿದೆ.

**ದೀಪದ ವ್ಯವಸ್ಥೆ.**

ರಾತ್ರಿ ಸಮಯದಲ್ಲಿ ಸಹಕಾರಿ ಸಂಘದ ಆವರಣದಲ್ಲಿ ವಾಣಿಜ್ಯ ಮಳಿಗೆಗಳ ಮುಂದೆ ಮುಖ್ಯದ್ವಾರದ ಮುಂದೆ ಆಡಳಿತ ಮಂಡಳಿಯು ದೀಪದ ಕಂಬದ ಸೌಲಭ್ಯವನ್ನು ಒದಗಿಸಲಾಗಿರುತ್ತದೆ.

**ಶ್ರಮಿಕ ವರ್ಗ.**

ರಾಸಾಯನಿಕ ಗೊಬ್ಬರ ಹಾಗೂ ಪಡಿತರ ಆಹಾರ ಧಾನ್ಯಗಳು ಸೀಮೆ ಎಣ್ಣಿ ಮತ್ತು ಸಕ್ಕರೆಯನ್ನು ಲಾರಿಯಿಂದ ಕೆಳಗಿಸಿ ಗೋದಾಮಗಳಿಗೆ ಸಾಗಿಸಲು ಹಮಾಲರು ದೈಹಿಕ ಶ್ರಮ ಪಡುತ್ತಾರೆ. ನಂತರ ಕೈಕಾಲು ತೂಳೆದುಕೊಳ್ಳಲಿಕ್ಕೆ ಸ್ಥಾನ ಮಾಡಲಿಕ್ಕೆ ಹಾಗೂ ರೈತರ ಮುಖ ಮರ್ಜನದ ಸಲುವಾಗಿ ಆವರಣದಲ್ಲಿ ನೀರಿನ ಬಾವಿಯ ಸೌಲಭ್ಯವಿರುತ್ತದೆ.

**ನವೀಕೃತ ಕಾರ್ಯಲಯದ ಸೌಲಭ್ಯ.**

ನವೀಕೃತ ಕಾರ್ಯಾಲಯವನ್ನು ಹೆದ್ದಾರಿಗೆ ಹೊಂದಿಕೊಂಡಿರುವ ವಾಣಿಜ್ಯ ಮಳಿಗೆಗಳ ಮೇಲೆ ನಿರ್ಮಿಸಲಾಗಿದೆ. ಈ ಸಂಘವು ತ್ವರಿತ ಕಾರ್ಯನಿರ್ವಹಣೆಗಾಗಿ ಹಾಗೂ ಸದಸ್ಯರಿಗೆ ಸರಳ ಶೀಘ್ರ ಪತ್ತಿನ ಸೌಕರ್ಯಕಾಗಿ ಹಣಕಾಸಿನ ವ್ಯವಹಾರಗಳನ್ನೆಲ್ಲವನ್ನು ಗಣಕಿಕೃತಗೊಳಿಸಲಾಗಿರುತ್ತದೆ.

ಈ ನವೀಕೃತ ಕಾರ್ಯಾಲಯವನ್ನು ೧೮-೧೧-೨೦೧೪ ರಂದು ಮಾಜಿ ಮುಖ್ಯ ಮಂತ್ರಿ ಜಗದೀಶ ಶೆಟ್ಟರ ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಸತೀಶ ಜಾರಕಿಹೊಳಿ ಉದ್ಘಾಟಿಸಿದರು. ಈ ಆಧುನಿಕ ಕಾರ್ಯಾನಿರ್ವಹಣೆಯಿಂದ ರೈತಾಪಿ ವರ್ಗಕ್ಕೆ ಅನುಕೂಲವಾಯಿತು.

ಅದ್ಯಕ್ಷರ ಕೊಠಡಿ, ಆಡಳಿತ ಮಂಡಳಿಯ ಸಭಾಭವನ ನವೀಕೃತ ಸೌಕರ್ಯಗಳಿಂದ ಕೂಡಿರುತ್ತದೆ. ಮುಂತಾದ ನವೀಕೃತ ಸೌಕರ್ಯಗಳಿಂದ ಕೂಡಿದ ಕೊಠಡಿ ಸೌಲಭ್ಯಗಳನ್ನು ಹೊಂದಿರುತ್ತದೆ.

### ೩.೮) ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಮಾನವ ಸಂಪನ್ಮೂಲ :

**ಸಿಬ್ಬಂದಿ ವರ್ಗ**

| | |
|---|---|
| ೧) ಬಾಳಪ್ಪ ಯಮನಪ್ಪ ಮೇತ್ರಿ | : ಮುಖ್ಯ ಕಾರ್ಯನಿರ್ವಾಹಕರು. |
| ೨) ಬಸವರಾಜ ಶೆಟ್ಟೆಪ್ಪ ಬಾಗೇವಾಡಿ | : ಲೆಕ್ಕಪಾಲಕರು. |
| ೩) ರಾಜಪ್ಪ ಅಡಿವೆಪ್ಪ ಪಾಲಭಾಂವಿ | : ದ್ವಿತೀಯ ದರ್ಜೆ ಸಹಾಯಕರು. |
| ೪) ಮಲ್ಲಪ್ಪ ಹೆಬ್ಬಾಳ | : ದ್ವಿತೀಯ ದರ್ಜೆ ಸಹಾಯಕರು. |
| ೫) ಹನಮಂತ ಬಸಪ್ಪ ಪಾಟೀಲ | : ಸಿಪಾಯಿ. |
| ೬) ಸಿದ್ರಾಮ ಸಂತ್ರಾಮ ಕಲಾಲ | : ಸಿಪಾಯಿ. |

ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದಲ್ಲಿ ನಿಯಂತ್ರಣದ ಅಧಿಕಾರ ಹೊಂದಿರುವ ಆಡಳಿತ ಸಮಿತಿಗೆ ಸಲಹೆ ಸೂಚನೆಗಳನ್ನು ನೀಡಲು ಮತ್ತು ಸರಕಾರದ ಕಾನೂನಿನ ಸಹಕಾರದ ವಿಧಿನಿಯಮಾವಳಿಗಳನ್ನು ಕಾರ್ಯನಿರ್ವಹಣೆಯು ಅನುಸರಣೆಯಲ್ಲಿ ತರಲು ಅನುಕೂಲವಾಗುವಂತೆ ಕಾರ್ಯಲಯದ ಸಿಬ್ಬಂದಿ ವರ್ಗ ಇರುತ್ತದೆ. ಅವರನ್ನು ರಾಜ್ಯ ಸರಕಾರದ ಸಹಕಾರ ಇಲಖೆಯ ನಿಯಮಾವಳಿ ಪ್ರಕಾರ ಮುಖ್ಯ ಕಾರ್ಯಾನಿರ್ವಹಕ ಮತ್ತು ಇತರ ಸಿಬ್ಬಂದಿಯನ್ನು ನೇಮಕ ಮಾಡಲಾಗುತ್ತದೆ. ಒಬ್ಬ ಮುಖ್ಯಕಾರ್ಯನಿರ್ವಹಕ, ಒಬ್ಬ ಲೆಕ್ಕಿಗ, ಒಬ್ಬ ದ್ವಿತಿಯ ದರ್ಜೆಯ ಸಹಾಯಕ, ಇಬ್ಬರು ಸಿಪಾಯಿಗಳು, ನ್ಯಾಯ ಬೆಲೆ ಅಂಗಡಿಗೆ ಒಬ್ಬ ಕಾರ್ಯದರ್ಶಿ, ಒಬ್ಬ ಮಾರಾಟ ಸಹಾಯಕರು, ಒಬ್ಬ ಸಿಪಾಯಿ, ೧೦ ಜನ ಹಮಾಲರು (ತಾತ್ಕಾಲಿಕ).

**ಉಪಸಂಹಾರ :**

ಈ ಅಧ್ಯಾಯದಲ್ಲಿ ಕಲ್ಲೋಳಿಯ ಬೌಗೋಳಿಕ ಹಿನ್ನೆಲೆ, ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಉಗಮ ಮತ್ತು ವಿಕಾಸ, ಸಹಕಾರ ಇಲಾಖೆಯ ನಿಯಮಾನುಸಾರ

ಸಂಘದ ಹೆಸರು ಬದಲಾವಣೆ ಹಾಗೂ ಆಡಳಿತ ಮಂಡಳಿಯ ರಚನೆ, ಸಿಬ್ಬಂದಿ, ಆಡಳಿತ ಸಮಿತಿಯ ಅಧಿಕಾರ ಮತ್ತು ಕಾರ್ಯಗಳು, ಸೌಲಭ್ಯಗಳು (ಅಭಿವೃದ್ಧಿ ಕಾರ್ಯಗಳು), ಮಾನವ ಸಂಪನ್ಮೂಲಗಳ ಬಗ್ಗೆ ವಿಸ್ತೃತವಾದ ವಿವರಣೆಯನ್ನು ಕೈಗೆತ್ತಿಕೊಂಡು ಸಮಗ್ರ ಪರಿಚಯ ಮಾಡಿಕೊಡಲಾಗಿದೆ.

# ಅಧ್ಯಾಯ – ನಾಲ್ಕು

## ಕಲ್ಲೋಳಿ ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘದ ಅರ್ಥಿಕ ಪ್ರಗತಿ ಪರಿಶೀಲನೆ :

೪.೧ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಐದು ವರ್ಷದ ವಿಶ್ಲೇಷಣೆ

೪.೨ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಸದಸ್ಯರ ವಿವರ.

೪.೩ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಶೇರು ಬಂಡವಾಳ ಪ್ರಮಾಣ.

೪.೪ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸದಸ್ಯರಿಗೆ ಒದಗಿಸಿದ ಪತ್ತಿನ ಸೌಲಭ್ಯ ವಿವರ.

೪.೫ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಲಾಭ (ಆದಾಯ) ವಿವರ.

೪.೬ ಕಲ್ಲೋಳಿ ಸಹಕಾರ ಸಂಘದ ಪಡಿತರ ಪದ್ಧತಿ ಮತ್ತು ವ್ಯಾಪಾರಿ ಪತ್ರಿಕೆಯ ಲಾಭ ವಿವರ.

೪.೭ ಕಲ್ಲೋಳಿ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ವೆಚ್ಚದ ವಿವರ.

# ಅಧ್ಯಾಯ– ನಾಲ್ಕು

## ಕಲ್ಲೋಳಿ ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘದ ಅರ್ಥಿಕ ಪ್ರಗತಿ ಪರಿಶೀಲನೆ :

**ಪ್ರಸ್ಥಾವನೆ :**

ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಯಶಸ್ಸು, ಈ ಸಹಕಾರಿ ಸಂಘವು ಸ್ಥಾಪನೆಯಾದ ಪ್ರದೇಶ, ಅದರಲ್ಲಿ ರೈತಾಪಿ ಸದಸ್ಯರಿಗೆ ಒದಗಿಸುತ್ತಿರುವ ಪತ್ತಿನ ಸೌಲಭ್ಯ, ಮತ್ತು ಇತರೆ ಸೌಲಭ್ಯಗಳನ್ನು ಅವಲಂಬಿಸಿರುತ್ತದೆ. ಅದರ ಅರ್ಥಿಕ ಪ್ರಗತಿಯನ್ನು ಪರಿಶೀಲಿಸುವುದಕ್ಕಾಗಿ ಈ ಅಧ್ಯಾಯದಲ್ಲಿ ಸಹಕಾರಿ ಸಂಘದ ಸದಸ್ಯರ ಬೆಳವಣಿಗೆಯ ದರ, ಪ್ರಮುಖವಾಗಿ ಸಂಘದ ಸದಸ್ಯರ ಸಂಖ್ಯೆಯಲ್ಲಿ ಪ್ರಗತಿ ಅಥವಾ ಕುಂಠಿತವಾಗಿದೆಯೋ ಎಂಬುದನ್ನು ತಿಳಿದುಕೊಳ್ಳಲಾಗುತ್ತದೆ.

೨೦೧೦–೧೧ ರಿಂದ ೨೦೧೪–೧೫ ರವರೆಗೆ ಈ ಸಹಕಾರಿ ಸಂಘದಲ್ಲಿ ವಿವಿಧ ಸದಸ್ಯರಿಗೆ ಒದಗಿಸಲಾದ ಪತ್ತಿನ ಸೌಲಭ್ಯ ಪ್ರವೃತ್ತಿಯನ್ನು ಪರಿಶೀಲಿಸಲಾಗಿದೆ. ಅದಕ್ಕೆ ಇರುವ ಹಲವಾರು ಕಾರಣಗಳನ್ನು ತಿಳಿದುಕೊಳ್ಳಲಾಗುತ್ತದೆ.

ಈ ಅಧ್ಯಯನದ ಅವಧಿಯಲ್ಲಿ ಈ ಸಹಕಾರಿ ಸಂಘದ ಆದಾಯ ಮತ್ತು ವೆಚ್ಚಗಳ ಪ್ರಗತಿಯ ಪರಿಶೀಲನೆ ಮಾಡಲಾಗುತ್ತದೆ. ಆದಾಯದ ವಿವಿಧ ಬಾಬುಗಳು ಮತ್ತು ಅವುಗಳ ಪ್ರತಿಶತ ಪ್ರಮಾಣ, ವೆಚ್ಚದ ವಿವಿಧ ಮೂಲಗಳು ಹಾಗೂ ಅವುಗಳ ಏರಿಕೆ ಅಥವಾ ಇಳಿಕೆಯ ಬಗ್ಗೆ ತಿಳಿದುಕೊಳ್ಳಲಾಗುತ್ತದೆ.

ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ಲಾಭಗಳಿಸುವ ಉದ್ದೇಶವನ್ನು ಹೊಂದಿರುವುದಿಲ್ಲ. ಸದಸ್ಯರಿಗೆ ಒದಗಿಸುವ ಸೇವೆಯೇ ಪ್ರಮುಖ ಉದ್ದೇವಾಗಿರುತ್ತದೆ. ಈ ಸಂಘದ ಸೇವೆಯೇ ಅದರ ಚಾಣಕ್ಷತನ, ದಕ್ಷತೆ ಮತ್ತು ಪ್ರಮಾಣಿಕತೆಯನ್ನು ತೋರಿಸುತ್ತದೆ. ಪತ್ತಿನ ಮತ್ತು ಇತರ ಸೌಲಭ್ಯವನ್ನು ಒದಗಿಸುವುದಕ್ಕೆ ಯಾವ ಪ್ರವೃತ್ತಿಯನ್ನು ಹೊಂದಿದೆ ಎಂಬುದನ್ನು ತಿಳಿದುಕೊಳ್ಳಲಾಗುತ್ತದೆ.

ಹೀಗೆ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಅರ್ಥಿಕ ಪ್ರಗತಿಯ ಪರಿಶೀಲನೆ ಹಾಗೂ ಹಾನಿಗೆ ಕಾರಣಗಳನ್ನು ತಿಳಿದುಕೊಂಡು ಮುಂದಿನ ಅಧ್ಯಯನಕ್ಕೆ ಅಡಿಪಾಯಯಾಗುವಂತೆ ಮಾಡುವದೇ ಈ ಅಧ್ಯಾಯದ ಪ್ರಮುಖ ಆಶಯವಾಗಿದೆ.

ಈ ಸಹಕಾರಿ ಸಂಘದ ಆರ್ಥಿಕ ಬೆಳವಣಿಗೆ ದರ ಮತ್ತು ಪ್ರತಿಶತ ಪ್ರಮಾಣವನ್ನು ತೋರಿಸುವುದಕ್ಕಾಗಿ ಈ ಸಮೀಕರಣ ಬಳಸಲಾಗಿದೆ.

೧) ಏರಿಕೆ/ಇಳಿಕೆ ದರದ ಸೂತ್ರ = ಚಾಲ್ತಿ ವರ್ಷದ ದರ–ಹಿಂದಿನ ವರ್ಷದ ದರ

೨) ಪ್ರತಿಶತ ಪ್ರಮಾಣದ ಸೂತ್ರ = ಏರಿಕೆ / ಇಳಿಕೆ ದರ ವ್ಯತ್ಯಾಸ X ೧೦೦
ಹಿಂದಿನ ವರ್ಷದ ದರ

**೪.೧ ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಸದಸ್ಯರ ಬೆಳವಣಿಗೆ ದರದ ವಿಶ್ಲೇಷಣೆ.**

ಪ್ರಾರಂಭದಲ್ಲಿ ೨೫ ರೈತ ಸದಸ್ಯರಿಂದ ಸ್ಥಾಪಿಸಲ್ಪಟ್ಟ ಈ ಸಹಕಾರಿ ಸಂಘವು ವರ್ಷದಿಂದ ವರ್ಷಕ್ಕೆ ಸದಸ್ಯರ ಸಂಖ್ಯೆಯಲ್ಲಿ ವ್ಯತ್ಯಾಸ ಹೊಂದುತ್ತ ಬೆಳವಣಿಗೆ ಹೊಮದಿರುತ್ತದೆ. ಈ ಸದಸ್ಯರ ಸಂಖ್ಯೆಯ ಪ್ರಮಾಣವನ್ನು ಈ ಕೋಷ್ಟಕದಲ್ಲಿ ವಿಶ್ಲೇಷವಾಗಿರುತ್ತದೆ.

| ಅ.ನಂ | ವರ್ಷ | ಸದಸ್ಯರ ಸಂಖ್ಯೆ | ಏರಿಕೆ/ಇಳಿಕೆ ಸಂಖ್ಯೆ | ಏರಿಕೆ/ಇಳಿಕೆ ಪ್ರತಿಶತ |
|---|---|---|---|---|
| ೧ | ೨೦೦೯–೧೦ | ೧೮೬೧ | – | – |
| ೨ | ೨೦೧೦–೧೧ | ೧೮೭೬ | ೧೫ | ೦–೮೦ |
| ೩ | ೨೦೧೧–೧೨ | ೧೮೮೬ | ೧೦ | ೦.೫೩ |
| ೪ | ೨೦೧೨–೧೩ | ೧೮೯೦ | ೦೪ | ೦.೨೦ |
| ೫ | ೨೦೧೩–೧೪ | ೨೦೦೯ | ೧೧೯ | ೬.೨೯ |
| ೬ | ೨೦೧೪–೧೫ | ೧೯೬೬ | –೪೩ | –೨.೧೪ |

ಮೂಲ ೧ : ಪ್ರಾ.ಕೃ.ಪ.ಸ.ಸಂಘ, ಕಲ್ಲೋಳಿ

**ಸಹಕಾರಿ ಸಂಘದ ಸದಸ್ಯರ ಬೆಳವಣಿಗೆ ದರ**

ಈ ಸಹಕಾರಿ ಸಂಘದಲ್ಲಿ ಪತ್ತಿನ ಸೌಲಭ್ಯದ ವ್ಯವಹಾರಕ್ಕಾಗಿ ನಿರತರಾದವರ ರೈತ ಸದಸ್ಯರ ಬೆಳವಣಿಗೆ ದರದ ಬಗ್ಗೆ ವಿಶ್ಲೇಷಣೆ, ಸಂಘದ ಪತ್ತಿನ ಧೋರಣೆ ಮತ್ತು ಸದಸ್ಯರ ಪ್ರವೃತ್ತಿಯ ಬಗ್ಗೆ ಇಲ್ಲಿ ಚರ್ಚಿಸಲಾಗಿರುತ್ತದೆ.

೧. ೨೦೦೯-೧೦ ರ ಅವಧಿಯಲ್ಲಿ ಈ ಸಹಕಾರಿ ಸಂಘದ ಸದಸ್ಯರ ಸಂಖ್ಯೆ ೧೮೬೧ ಇದ್ದು, ೨೦೧೦-೧೧ ರ ವೇಳೆಗೆ ೧೮೭೬ ಕ್ಕೆ ಏರಿಕೆಯಾಗಿದೆ. ಅಂದರೆ ೦.೮೦ ರಷ್ಟು ಬೆಳವಣಿಗೆ ಹೊಂದಿದೆ.

೨. ೨೦೧೧-೧೨ನೇಯ ಸಾಲಿನಲ್ಲಿ ಸದಸ್ಯರ ಸಂಖ್ಯೆ ೧೮೭೬ ರಿಂದ ೧೮೮೬ ಕ್ಕೆ ಬೆಳವಣಿಗೆಯಾಗಿದೆ ಅಂದರೆ ೦.೫೩ ರಷ್ಟು ಏರಿಕೆಯ ಪ್ರವೃತ್ತಿ ಹೊಂದಿರು ೫೩ ಕಂಡು ಬರುತ್ತದೆ.

೩. ೨೦೧೨-೧೩ರ ಅವಧಿಯಲ್ಲಿ ೧೮೮೩ ರಿಂದ ೧೮೯೦ ಕ್ಕೆ ಏರಿಕೆಯಾಗಿದೆ, ಅಂದರೆ ೦.೨೦ ರಷ್ಟು ಬೆಳವಣಿಗೆಯಾಗಿರುತ್ತದೆ.

೪. ೨೦೧೩-೧೪ನೇ ಸಾಲಿನಲ್ಲಿ ಸದಸ್ಯ ಸಂಖ್ಯೆ ೧೮೯೦ ರಿಂದ ೨೦೦೯ ಏರಿಕೆಯಾಗಿರುತ್ತದೆ. ೧೧೯ ಹೊಸ ಸದಸ್ಯರು ಸದಸ್ಯತ್ವ ಪಡೆಯುವುದರಿಂದ, ಸದಸ್ಯರ ಬೆಳವಣಿಗೆ ದರ ೬.೨೯ ರಷ್ಟು ಏರಿಕೆಯ ಪ್ರವೃತ್ತಿಯನ್ನು ಹೊಂದಿರುವುದು ಕಂಡು ಬರುತ್ತದೆ.

೫. ೨೦೧೪-೧೫ ರ ಅವಧಿಯಲ್ಲಿ ಸದಸ್ಯ ಸಂಖ್ಯೆ ೨೦೦೯ ರಿಂದ ೧೯೬೬ ಕ್ಕೆ ಕಡಿಮೆಯಾಗಿರುತ್ತದೆ. ಅಂದರೆ ೪೩ ಸದಸ್ಯರು ಕಡಿಮೆಯಾಗಿರುವದರಿಂದ ೨.೧೪ ರಷ್ಟು ಸದಸ್ಯರ ಬೆಳವಣಿಗೆ ದರ ಇಳಿಕೆ ಪ್ರವೃತ್ತಿಯನ್ನು ಹೊಂದಿರುವದು ಕಂಡು ಬರುತ್ತದೆ. ಹೀಗೆ ಒಟ್ಟು ಸದಸ್ಯರ ಸಂಖ್ಯೆಯಲ್ಲಿ ೨೦೧೩-೧೪ ರವರೆಗೆ ಏರಿಕೆ ಇದ್ದರೂ ೨೦೧೪-೧೫ರ ಅವಧಿಯಲ್ಲಿ ಇಳಿಕೆ ಪ್ರವೃತ್ತಿಯನ್ನು ಹೊಂದಿರುವದು ಕಂಡು ಬರುತ್ತದೆ.

**೪.೨ ಶೇರು ಬಂಡವಾಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ, ಕಲ್ಲೋಳಿ.**

ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ೨೬/೨/೧೯೩೪ ರಲ್ಲಿ ೨ ಶೇರಧಾರಣ ಮಾಡುವದನ್ನು ಪ್ರಾರಂಬಿಸಿತು. ಆಗ ಪ್ರತಿ ಶೇರಿನ ಮುಖ ಬೆಲೆ ೫ ರೂ ಗಳಿದ್ದು, ೧೯೩೫ ನೇ ಸಾಲಿಗೆ ೬೩೫ ರೂಪಾಯಿಗಳಷ್ಟು ಶೇರು ಬಂಡವಾಳ ಸಂಗ್ರಹವಾಯಿತು. ಈಗ ಸಂಘದ ಶೇರಿನ ಮುಖ ಬೆಲೆ ೧೦೦೦ ರೂಪಾಯಿಗಳು ಇರುತ್ತವೆ.

## ಸದಸ್ಯರ ಶೇರು ಬಂಡವಾಳ (ಲಕ್ಷಗಳಲ್ಲಿ)

| ಅ.ನಂ | ವರ್ಷ | ಶೇರು ಬಂಡವಾಳ | ಏರಿಕೆ/ಇಳಿಕೆ ದರ | ಪ್ರತಿಶತ |
|---|---|---|---|---|
| ೧ | ೨೦೧೦-೧೧ | ೬೨,೯೯, ೭೮ | - | - |
| ೨ | ೨೦೧೧-೧೨ | ೮೧, ೨೧, ೨೮೦ | ೧೮, ೨೧, ೫೦೦ | ೨೮.೯೧ |
| ೩ | ೨೦೧೨-೧೩ | ೮೧, ೨೬, ೫೨೫ | ೫೨೪೫ | ೦.೦೬೪ |
| ೪ | ೨೦೧೩-೧೪ | ೯೦, ೪೪, ೪೧೫ | ೯, ೧೭೮೯೦ | ೧೧.೨೯ |
| ೫ | ೨೦೧೪-೧೫ | ೯೦, ೩೩, ೭೨೫ | -೧೦೬೯೦ | -೦.೧೧೮ |

ಮೂಲ ೨ : ಅಥಾವೆ ಪತ್ರಿಕೆಗಳು ೨೦೧೦-೧೫

೨೦೧೦ ರಿಂದ ೨೦೧೫ ರ ಶೇರು ಬಂಡವಾಳ ಸಂಗ್ರಹದ ಪ್ರಮಾಣ ತೋರಿಸುವ ಸ್ತಂಭ ಚಿತ್ರ






೨೦೧೦ ರಿಂದ ೧೫ ರಲ್ಲಿ ವಿವಿಧ ಪ್ರಕಾಶದ ಶೇರು ಬಂಡವಾಳ ತೋರಿಸುವ ವೃತ್ತ ಖಂಡಾ ಚಿತ್ರ.

ಈ ಮೇಲಿನ ಕೋಷ್ಟಕದಿಂದ ತಿಳಿದು ಬರೆಯುವುದೇನೆಂದರೆ ಶೇರು ಬಂಡವಾಳದ ಪ್ರಮಾಣ ೨೦೧೦-೧೧ ರಿಂದ ೨೦೧೩-೧೪ ರವರೆಗೆ ಏರಿಕೆಯ ಪ್ರವೃತ್ತಿಯನ್ನು ಶೇರು ತೋರಿಸಲಾಗಿದೆ. ೨೦೧೪-೧೫ನೇ ಸಾಲಿನಲ್ಲಿ ಶೇರು ಬಂಡವಾಳದ ಪ್ರಮಾಣದಲ್ಲಿ ಇಳಿಕೆ ಪ್ರವೃತ್ತಿಯನ್ನು ಕಾಣುತ್ತೇವೆ.

೧. ೨೦೧೦-೧೧ ರಲ್ಲಿ ಶೇರು ಬಂಡವಾಳದ ಪ್ರಮಾಣ ೬೨. ೯೯, ೭೮೦ ಇದ್ದು ಅದು ೨೦೧೧-೧೨ರಲ್ಲಿ ೮೧, ೨೧, ೨೮೦, ಅಂದರೆ ೧೮, ೨೧, ೫೦೦ ರಷ್ಟು ಶೇರು ಬಂಡವಾಳ ಅಧಿಕವಾಗಿದೆ. ೨೮.೯೧ ಪ್ರತಿಶತ ಹೆಚ್ಚಾಗಿರುತ್ತದೆ.
೨. ೨೦೧೨-೧೩ ರ ಅವಧಿಯಲ್ಲಿ ಶೇರು ಬಂಡವಾಳ ಪ್ರಮಾಣವು ೮೧, ೨೬, ೫೨೫ ಇದ್ದು, ಅದು ೫೨೪೫ ಅಂದರೆ ಪ್ರತಿಶತ ೦.೦೬ ಏರಿಕೆಯಾಗಿರುವದು ಕಂಡು ಬರುತ್ತದೆ.

೩. ೨೦೧೩-೧೪ನೇ ಸಾಲಿನಲ್ಲಿ ಶೇರು ಬಂಡವಾಳದ ಪ್ರಮಾಣವು ೯೦, ೪೪, ೪೧೫ ಇದ್ದು ಅದು ೨೦೧೨-೧೩ರ ಕ್ಕಿಂತ ೯, ೧೭, ೮೯೦ ರಷ್ಟು ಏರಿಕೆಯಾಗಿದೆ. ಅಂದರೆ ಪ್ರತಿಶತ ೧೧.೨೯ ರಷ್ಟು ಅಧಿಕವಾಗಿರುತ್ತದೆ.

೪. ಶೇರು ಬಂಡವಾಳದ ಪ್ರಮಾಣ ೨೦೧೪-೧೫ ರಲ್ಲಿ ೯೦.೩೩, ೭೨೫ ಇದ್ದು ೨೦೧೩-೧೪ ರಕ್ಕಿಂತ ೧೦೬೯೦ ರಷ್ಟು ಕಡಿಮೆಯಾಗಿರುತ್ತದೆ. ಅಂಶಕ ಪ್ರತಿಶತ ೦.೧೧೮ ರಷ್ಟು ಇಳಿಕೆ ಪ್ರವೃತ್ತಿ ಹೊಂದಿರುವುದು ತೋರಿಸುತ್ತದೆ.

ಹೀಗೆ ಈ ಸಂಘದ ಒಟ್ಟು ಶೇರು ಬಂಡವಾಳ ಪ್ರಮಾಣವು ೨೦೧೦-೧೧ ರಿಂದ ೨೦೧೩-೧೪ ವರೆಗೆ ಏರಿಕೆ ಪ್ರವೃತ್ತಿ ಹೊಂದಿದ್ದರೂ ಅದು ೨೦೧೪-೧೫ ನೇ ಸಾಲಿನಲ್ಲಿ ಇಳಿಕೆ ಪ್ರವೃತ್ತಿ ಹೊಂದಿರುವುದು ಕಂಡು ಬರುತ್ತದೆ.

**<u>೪.೩ ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ,</u>** : ೨೦೧೦-೧೧ ರಿಂದ ೩ ೨೦೧೪-೧೫ ರ ಅವಧಿಯಲ್ಲಿ ಸದಸ್ಯರಿಗೆ ಒದಗಿಸಿದ ಒಟ್ಟು ಸಾಲದ (ಪತ್ತಿನ) ಸೌಲಭ್ಯದ ಪ್ರಮಾಣದ ಬಗ್ಗೆ ಇಲ್ಲಿ ಚರ್ಚಿಸಲಾಗುತ್ತಿದೆ.

**ಸದಸ್ಯರಿಗೆ ಒದಗಿಸಿದ ಪತ್ತಿನ ಪ್ರಮಾಣ**

| ಅ.ನಂ | ವರ್ಷ | ಸದಸ್ಯರಿಗೆ ಕೊಟ್ಟ ಒಟ್ಟು ಪತ್ತು | ಏರಿಕೆ/ಇಳಿಕೆ ದರ | ಪ್ರತಿಶತ |
|---|---|---|---|---|
| ೧ | ೨೦೧೦-೧೧ | ೪.೭,೪೬ ೯೦೦೦ | - | - |
| ೨ | ೨೦೧೧-೧೨ | ೬,೪೭, ೪೫೦೦೦ | ೧,೭೨,೭೬೦೦೦ | ೩೬.೩೯ |
| ೩ | ೨೦೧೨-೧೩ | ೪,೮೩ ೮೨೫೦೦ | -೧,೬೩,೬೨,೫೦೦ | ೨೫.೨೭ |
| ೪ | ೨೦೧೩-೧೪ | ೬,೬೧,೮೦ ೭೦೦ | ೧ ೭೭, ೯೮೨೦೦ | ೩೬.೭೮ |
| ೫ | ೨೦೧೪-೧೫ | ೬,೫೯,೩೭,೭೦೦ | -೨,೪೩೦೦೦ | -೦.೩೬೭ |

ಮೂಲ ೩ : ೨೦೧೦-೧೧ ರಿಂದ ೨೦೧೪-೧೫ ರ ಅಢಾವೆ ಪತ್ರಿಕೆಗಳು

೧) ೨೦೧೦-೧೧ ರ ಅವಧಿಯಲ್ಲಿ ೪.೬೭.೫೧೦೦೦ ರೂಗಳ ಬೆಳೆ (ಅಲ್ಪಾವಧಿ) ಸಾಲವನ್ನು ಹಾಗೂ ೭೧೮೦೦೦ ರೂಗಳ ಮಾಧ್ಯಮಾವಧಿ ಸಾಲ ಅಂದರೆ ಸದಸ್ಯರಿಗೆ ಒದಗಿಸಿದ ಒಟ್ಟು ಸಾಲದ ಪ್ರಮಾಣ ೪,೭೪,೬೯೦೦೦ ರೂಗಳ

೨) ೨೦೧೧-೧೨ ರಲ್ಲಿ ೫,೮೨೦೮೫೦೦ ರೂಗಳ ಬೆಳೆ (ಅಲ್ಪಾವಧಿ) ಸಾಲ ಹಾಗೂ ೬೫೩೬೫೦೦ ರೂಗಳ ಮಾಧ್ಯಮಾವಧಿ ಅಂದರೆ ಸದಸ್ಯರಿಗೆ ಒದಗಿಸಿದ ಒಟ್ಟು ಸಾಲದ ಪ್ರಮಾಣ ೬,೪೭,೪೫೦೦೦ ರೂ.ಗಳು.

೩) ೨೦೧೨-೧೩ ರ ಸಾಲಿನಲ್ಲಿ ಈ ಸಹಕಾರಿ ಸಂಘ ಸದಸ್ಯರಿಗೆ ಒದಗಿಸಿದ ಪತ್ತಿನ ಪ್ರಮಾಣ ' (ಅಲ್ಪಾವಧಿ) ಸಾಲ ಹಾಗೂ ೪,೮೧,೫೬೫೦೦ ರೂಗಳ ಹಾಗೂ ೧೯೬೦೦೦ ರೂಗಳಷ್ಟು ಮಾಧ್ಯಮಾವಧಿ ಸಾಲ ಒದಗಿಸಿದೆ. ಇಲ್ಲಿ ಪತ್ತಿನ ಸೌಲಭ್ಯದ ಪ್ರಮಾಣ  ಇಳಿಕೆಯ ಪ್ರವೃತ್ತಿ ಹೊಂದಿರುವದು ಕಂಡು ಬರುತ್ತದೆ.

೪) ೨೦೧೩-೧೪ ನೇ ಸಾಲಿನಲ್ಲಿ ಈ ಸಂಘದಿಂದ ಸದಸ್ಯರಿಗೆ ಪೂರೈಸಿದ ಬೆಳೆಸಾಲ ೪,೮೯,೪೭,೫೦೦, ರೂ.ಗಳು, ಮಧ್ಯಮಾವಧಿ ಸಾಲ ೨೨, ೪೩, ೨೦೦, ರೂ.ಗಳ, ಆದರೆ ಸದಸ್ಯರಿಗೆ ಒದಗಿಸಿದ ಒಟ್ಟು ಸಾಲದ ಪ್ರಮಾಣ ೬,೬೧,೮೦,೭೦೦, ರೂ.ಗಳು, ಅಂದರೆ ಪತ್ತಿನ ಸೃಷ್ಟಿಯ ಪ್ರಮಾಣ ಏರಿಕೆ ಪ್ರವೃತ್ತಿಯನ್ನು ತೋರಿಸುತ್ತದೆ.ಅಂದರೆ ೧,೭೭,೮೯೨೦೦ ರೂಗಳ ಪತ್ತು ಅಧಿಕವಾಗಿದೆ.

೫) ೨೦೧೪-೧೫ರ ಅವಧಿಯಲ್ಲಿ ಸಹಕಾರಿ ಸಂಘವು ತನ್ನ ಸದಸ್ಯರಿಗೆ ೬,೩೬, ೯೪,೫೦೦ ರೂ.ಗಳ ಬೆಳೆ (ಅಲ್ಪಾವಧಿ) ಸಾಲ, ಹಾಗೂ ೨೨, ೪೩, ೨೦೦, ರೂ.ಗಳ ಮಧ್ಯಮಾವಧಿ ಸಾಲವನ್ನು ಒದಗಿಸಿದೆ.

ಹೀಗೆ ೨೦೧೧-೧೨ ಮತ್ತು ೨೦೧೩-೧೪ ಈ ಎರಡು, ವರ್ಷಗಳಲ್ಲಿ ಸದಸ್ಯರಿಗೆ ಒದಗಿಸಿದ ಸಾಲದ ಪ್ರಮಾಣವು ಏರಿಕೆ ಪ್ರವೃತ್ತಿಯನ್ನು ಹೊಂದಿದ್ದು, ೨೦೧೨-೧೩ ಮತ್ತು ೨೦೧೪-೧೫ ರ ಎರಡು ವರ್ಷ ಪತ್ತಿನ ಪ್ರಮಾಣವು ಇಳಿಕೆ ಪ್ರವೃತ್ತಿಯನ್ನು ಹೊಂದಿರುವುದು ತೋರಿಸುತ್ತದೆ.

ಈ ಪತ್ತಿನ ಸೌಲಭ್ಯದ ದರದಲ್ಲಿ ಏರಿಳಿತಾಗಲು ಹಲವಾರು ಕಾರಣಗಳಿವೆ.

೧. ಸರ್ಕಾರೇತರ ಹಣಕಾಸಿನ ಸಂಸ್ಥೆಗಳ ಸರಳ ಸಾಲದ ನೀತಿ.

೨. ಸುಲಭ (ಹಣಕಾಸು) ಸಾಲ ಪಡೆಯುವ ಒಲವು.

೩. ಬರಗಾಲ ಛಾಯೆ.

೪. ಸಕಾಲಕ್ಕೆ ನೀರಾವರಿ ಸೌಲಭ್ಯದ ಕೊರತೆ.

೫. ಸರಕಾರವು ಬಡ್ಡಿ ಹಾಗೂ ಸಾಲ ಮನ್ನಾ ಮಾಡುವ ಭರವಸೆ.

೬. ಸದಸ್ಯತ್ವದ ಮತ್ತು ಶೇರು ಸಂಗ್ರಹದ ವ್ಯತ್ಯಾಸ.

ಹೀಗೆ ಹಲವಾರು ಕಾರಣಗಳಿಂದ ಪತ್ತಿನ ಬೆಳವಣಿಗೆ ದರದಲ್ಲಿ ಏರಿಳಿತಗಳು ಕಂಡು ಬರುತ್ತದೆ.

೪.೪ ಪ್ರಾಥಮಿಕ ಪತ್ತಿನ ಸಹಕಾರಿ ಸಂಘ ನಿ., ಕಲ್ಲೋಳಿ ಲಾಭ (ಆದಾಯ)ದ ಪ್ರಮಾಣವನ್ನು ತೋರಿಸುವ ಕೊಷ್ಟಕ. ೪

| ಅ.ನಂ | ವರ್ಷ | ಲಾಭ(ಆದಾಯ) | ಏರಿಕೆ/ಇಳಿಕೆ ದರ | ಪ್ರತಿಶತ ಪ್ರಮಾಣ |
|---|---|---|---|---|
| ೧ | ೨೦೧೦-೧೧ | ೧೬೧೦೯೭೯ | - | - |
| ೨ | ೨೦೧೧-೧೨ | ೧೯೩೪೧೪೨ | ೩೨೩೧೬೩ | ೨೦.೬% |
| ೩ | ೨೦೧೨-೧೩ | ೨೦೮೦೩೪೩ | ೧೪೬೨೦೧ | ೭.೫೫% |
| ೪ | ೨೦೧೩-೧೪ | ೨೬೪೬, ೧೮೬ | ೫೬೫೮೪೩ | ೨೭.೨೦% |
| ೫ | ೨೦೧೪-೧೫ | ೨೧೨೨೯೦೧ | -೫೩೩೨೮೫ | -೧೯.೭೭% |

೪ ಆಧಾರ : ೨೦೧೦-೧೧, ೨೦೧೪-೧೫ ರ ಅಡಾವೆ ಪತ್ರಿಕೆಗಳು




೨೦೧೦-೧೧ ೨೦೧೧-೧೨ ೨೦೧೨-೧೩ ೨೦೧೩-೧೪ ೨೦೧೪-೧೫

## ಒಟ್ಟು ಲಾಭ (ಆದಾಯ)ದಲ್ಲಿನ ಪ್ರಗತಿ




೧. ೨೦೧೦-೧೧ ರಲ್ಲಿ ಒಟ್ಟು ಲಾಭ ೧೬,೧೯೭೯ ಲಕ್ಷ ರೂಪಾಯಿಗಳು ಇರುತ್ತದೆ.

೨. ೨೦೧೧-೧೨ ರಲ್ಲಿ ಒಟ್ಟು ಲಾಭ ೧೯೩೪೧೪೨ ಬಂದಿದ್ದು, ಅದು ೨೦೧೦-೧೧ ರಲ್ಲಿ ಒಟ್ಟು ಲಾಭಕ್ಕೆ ಹೋಲಿಸಿದರೆ ೩೨೩೧೬೩ ಲಕ್ಷ ರೂಪಾಯಿಗಳು, ಅಂದರೆ ಪ್ರತಿಶತ ೨೦.೬ ರಷ್ಟು ಲಾಭ (ಆದಾಯ) ವೃದ್ಧಿಸಿದೆ.

೩. ೨೦೧೨-೧೩ರಲ್ಲಿ ೨೦೮೦೩೪೩ ರೂ.ಗಳ ಒಟ್ಟು ಲಾಭ ಬಂದಿದ್ದು ಅದು ೨೦೧೧-೧೨ಕ್ಕೆ ಹೋಲಿಸಿದರೆ ೧೪೬೨೦೧ ಲಕ್ಷ ರೂಪಾಯಿಗಳ ಏರಿಕೆಯನ್ನು ಕಾಣುತ್ತೇವೆ. ಇದು ಪ್ರತಿಶತ ೭.೫೫ ರಷ್ಟು ವೃದ್ಧಿಸಿದೆ.

೪. ೨೦೧೩-೧೪ರಲ್ಲಿ ೨,೬೪,೬೧೮೬ ಗಳ ಒಟ್ಟು ಲಾಭ (ಆದಾಯ) ಬಮದಿದ್ದು ಅದು ೨೦೧೨-೧೩ಕ್ಕೆ ಹೋಲಿಸಿದರೆ ೫೬೫೮೮೪೩ ಲಕ್ಷ ರೂಪಾಯಿಗಳಿಗೆ ಏರಿಕೆಯಾಗಿದ್ದು ಕಂಡು ಬರುತ್ತದೆ. ಇದು ಪ್ರತಿಶತ ೨೭.೨೦ ರಷ್ಟು ವೃದ್ಧಿಸಿದೆ.

೫. ೨೦೧೪-೧೫ರಲ್ಲಿ ೨೧೨೯೦೧ ಒಟ್ಟು ಲಾಭ (ಆದಾಯ) ಬಂದಿದ್ದು, ಅದು ೨೦೧೩-೧೪ಕ್ಕೆ ಹೋಲಿಸಿದಾಗ ೫೨೩.೨೮ ರಷ್ಟು ಇರುತ್ತದೆ. ಇಲ್ಲಿ ಲಾಭ (ಆದಾಯ)ದ ಇಳಿಕೆ ಪ್ರವೃತ್ತಿ ಹೊಂದಿರುವದು ಕಂಡು ಬರುತ್ತದೆ.

ಹೀಗೆ ೨೦೧೦-೧೧ ರಿಂದ ೨೦೧೩-೧೪ ರವರೆಗೆ ಒಟ್ಟು ಲಾಭ (ಆದಾಯ) ವೃದ್ಧಿಸಿದೆ. ಆದರೆ ೨೦೧೪-೧೫ ರಲ್ಲಿ ಲಾಭ (ಆದಾಯ)ದ ಪ್ರಮಾಣದ ಇಳಿಕೆ ಪ್ರವೃತ್ತಿ ಕಂಡು ಬರುತ್ತದೆ.

## ೪.೫ : ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ವ್ಯಾಪಾರಿ ಪತ್ರಿಕೆಯ ಲಾಭ

ಸಹಕಾರಿ ಸಂಘದಲ್ಲಿ ಒಂದು ಪಡಿತರ ವ್ಯವಸ್ಥೆ ಇದ್ದು, ಅದು ಗ್ರಾಹಕರಿಗೆ ೫ ಹಂಚುತ್ತಿರುವ ಆಹಾರಧಾನ್ಯಗಳಾದ ಗೋಧಿ, ಅಕ್ಕಿ, ಸೀಮೆಎಣ್ಣೆ, ಸಕ್ಕರೆ ಹಾಗೂ ರೈತ ಸದಸ್ಯರಿಗೆ ಪೂರೈಸುತ್ತಿರುವ ರಾಸಾಯನಿಕ ಗೊಬ್ಬರ ಮತ್ತಿತರ ಸೇವೆಗಳನ್ನು ಒದಗಿಸಲಾಗುತ್ತಿದೆ. ಇದಕ್ಕೆ ಒಟ್ಟಿನಲ್ಲಿ ವ್ಯಾಪಾರಿ ಪತ್ರಿಕೆ ಎಂದು ಕರೆಯುತ್ತೇವೆ.

**ವ್ಯಾಪಾರಿ ಪತ್ರಿಕೆಯ ಲಾಭ :**

| ಅ.ನಂ | ವರ್ಷ | ವ್ಯಾಪಾರಿ ಲಾಭದ ಪ್ರಮಾಣ | ಏರಿಕೆ/ಇಳಿಕೆ ದರ (ರೂ.ಗಳಲ್ಲಿ) | ಪ್ರತಿಶತ ಪ್ರಮಾಣ |
|---|---|---|---|---|
| ೧ | ೨೦೧೦-೧೧ | ೧೪೯೯೦೨ | – | – |
| ೨ | ೨೦೧೧-೧೨ | ೨೧೬೧೫೭ | ೫೬೨೨೫ | ೩೫.೧೮ |
| ೩ | ೨೦೧೨-೧೩ | ೨೨೯೧೧೫ | ೧೨೯೫೮ | ೫.೯೯ |
| ೪ | ೨೦೧೩-೧೪ | ೬೬೮೫೧ | -೧೬೨೨೬೪ | -೭೦.೮೨ |
| ೫ | ೨೦೧೪-೧೫ | ೫೪೨೧೩ | -೧೨೬೩೮ | -೧೮.೯೦ |

ಮೂಲ ೫ : ೨೦೧೦-೧೧, ೨೦೧೪-೧೫ರ ಲಾಭ-ಹಾನಿ ಪತ್ರಿಕೆಗಳು




೨೦೧೦-೧೧ ೨೦೧೧-೧೨ ೨೦೧೨-೧೩ ೨೦೧೩-೧೪ ೨೦೧೪-೧೫

೧. ೨೦೧೦-೧೧ ರಲ್ಲಿ ವ್ಯಾಪಾರಿ ಮತ್ತು ಪಡಿತರ ವ್ಯವಸ್ಥೆಯಿಂದ ಲಾಭ, ೧,೫೯೯೦೨ ಲಕ್ಷ ರೂಪಾಯಿಗಳು ಬಂದಿರುತ್ತದೆ.

೨. ೨೦೧೧-೧೨ ರಲ್ಲಿ ೨,೧೬,೧೫೭ ರೂ.ಗಳು ಬಂದಿದ್ದು, ೨೦೧೦-೧೧ಕ್ಕೆ ಹೋಲಿಸಿದಾಗ ೫೬೨೫೫ ರೂ.ಗಳಷ್ಟು ವೃದ್ಧಿಸಿದೆ. ಅದು ಪ್ರತಿಶತ ೩೫.೧೮ ರಷ್ಟು ಏರಿಕೆಯಾಗಿದೆ.

೩. ೨೦೧೨-೧೩ ರ ಅವಧಿಯಲ್ಲಿ ೨,೯೧,೧೧೫ ವ್ಯಾಪಾರ ಮತ್ತು ಪಡಿತರ ವ್ಯವಸ್ಥೆಯಿಂದ ಒಟ್ಟು ಲಾಭ ಬಂದಿದ್ದು, ೨೦೧೧-೧೨ಕ್ಕೆ ಹೋಲಿಸಿದಾಗ ೧೨೯೫೮ ರಷ್ಟು ವೃದ್ಧಿಸಿದೆ. ಅದು ಪ್ರತಿಶತ ೫.೯೯ ರಷ್ಟು ಅಧಿಕವಾಗಿದೆ.

೪. ೨೦೧೩-೧೪ ರಲ್ಲಿ ವ್ಯಾಪಾರಿ ಮತ್ತು ಪಡಿತರ ಪದ್ಧತಿ ಒಟ್ಟು ಲಾಭ ೬೬೮೫೧ ರೂ.ಗಳಷ್ಟು ಬಂದಿದ್ದು, ೨೦೧೨-೧೩ಕ್ಕೆ ಹೋಲಿಸಿದರೆ, ೧,೬೨,೨೬೪ ರಷ್ಟು ಕಡಿಮೆಯಾಗಿದೆ ಅದು ಪ್ರತಿಶತ ೭೦.೮೨ ರಷ್ಟು ಕಡಿಮೆಯಾಗಿ ಇಳಿಕೆಯ ಪ್ರವೃತ್ತಿ ಕಂಡು ಬರುತ್ತದೆ.

೫. ೨೦೧೪-೧೫ರ ಸಾಲಿನಲ್ಲಿ ಈ ವ್ಯಾಪಾರಿ ವಲಯದಿಂದ ಒಟ್ಟು ೫೪೨೧೩ರೂಗಳ ಲಾಭ ಬಂದಿದ್ದು, ಅದನ್ನು ೨೦೧೩-೧೪ಕ್ಕೆ ಹೋಲಿಸಿದರೆ ಅದು ೧೨೬೩೮ ರಷ್ಟು ಕಡಿಮೆಯಾಗಿರುತ್ತದೆ. ಅದು ಪ್ರತಿಶತ ೧೮.೯೦ ರಷ್ಟು ಇಳಿಕೆಯಾಗಿರುವುದನ್ನು ತೋರಿಸುತ್ತದೆ.

**೪.೭ : ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ, ಕಲ್ಲೋಳಿ**

**ವೆಚ್ಚದ ಬಗ್ಗೆ ವಿವರಣೆ :**

ಈ ಸಹಕಾರಿ ಸಂಘದಲ್ಲಿ ಪತ್ತಿನ ವ್ಯವಹಾರ, ವಹಿವಾಟಿನ ಚಟುವಟಿಕೆಗಳನ್ನು ಸುವ್ಯವಸ್ಥಿತವಾಗಿ ನಿರ್ವಹಿಸಿಕೊಂಡು ಹೋಗುವ ಜವಾಬ್ದಾರಿ ಈ ಆಡಳಿತ ಮಂಡಳಿಯದಾಗಿರುತ್ತದೆ. ಈ ವೆಚ್ಚಗಳನ್ನು ಸಮಿತಿಯು ಆಡಳಿತ ನಿರ್ವಹಣೆಗಾಗಿ, ಕಾರ್ಯಾಲಯ ಮತ್ತು ಕಟ್ಟಡಗಳ ನಿರ್ವಹಣೆಗಾಗಿ ವ್ಯಯಿಸಬೇಕಾಗುತ್ತದೆ.

ಈ ವೆಚ್ಚಗಳನ್ನು ಸ್ಥೂಲವಾಗಿ ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ ಅವುಗಳೆಂದರೆ ೧) ನಿರ್ದಿಷ್ಟ ವೆಚ್ಚ, ೨) ನಿರ್ವಹಣಾ ವೆಚ್ಚ ಮತ್ತು ೩) ಇತರೆ ಸಮಾಜ ಕಲ್ಯಾಣದ ವೆಚ್ಚಗಳು.

**೧) ನಿರ್ದಿಷ್ಟ ವೆಚ್ಚಗಳು (ಸ್ಥಿರವೆಚ್ಚ)** : ೧. ಭವಿಷ್ಯನಿಧಿ ವಂತಿಗೆ ೨. ನ್ಯಾಯವಾದಿಗಳ ಶುಲ್ಕ ೩. ನೌಕರ ವಿಮಾ ೪. ಗ್ರಾಮ ಪಂಚಾಯತ ತೆರಿಗೆ ೫. ಸಹಕಾರ ಸಂಘಗಳ ನಿಧಿ ೬. ವಾಹನ ಬಾಡಿಗೆ ಮುಂತಾದವು ಸಹಕಾರಿ ಸಂಘಗಳ ನಿಬಂಧಕರ ಶುಲ್ಕ.

**೨) ನಿರ್ವಹಣಾ ವೆಚ್ಚಗಳು :** ೧. ಮುದ್ರಣ & ಲೇಖನ ಸಾಮಗ್ರಿಗಳು ೨. ಅಧ್ಯಕ್ಷರ ಹಾಗೂ ಸದಸ್ಯರ ಸಭಾಭತ್ಯೆ ಮತ್ತು ಪ್ರವಾಸ ಭತ್ಯೆ ೩. ಅಂಚೆ-ತಂತಿ ೪. ಜಾಹೀರಾತು ೫. ಗಣ್ಯವ್ಯಕ್ತಿಗಳ ಸಂದರ್ಶನ, ೬. ಕಟ್ಟಡಗಳ ನವೀಕರಣ ೭. ಸಭೆಯ ವೆಚ್ಚ ೮. ವಿದ್ಯುತ್ ಶುಲ್ಕ ೯. ಪ್ರಾಂಗಣ ನಿರ್ವಹಣೆ ೧೦. ಲೆಕ್ಕ ಪರಿಶೋಧನಾ ಶುಲ್ಕ ೧೧. ಪಗಾರ ೧೨. ನೌಕರರ ಬೋನಸ್ ೧೩. ವಾಹನ ಬಾಡಿಗೆ ಮತ್ತು ಹಮಾಲಿ ೧೪. ಚುನಾವಣಾ ವೆಚ್ಚ ೧೫. ಶತಮಾನೋತ್ಸವದ ವೆಚ್ಚ ೧೬. ಶೇರ ಲಾಭಾಂಶ ೧೭. ಯಶಸ್ವಿನಿ ಯೋಜನೆ ೧೮. ದಿನಪತ್ರಿಕೆಗಳು ಮುಂತಾದವು.

**೩) ಇತರೆ ಸಾಮಾಜಿಕ ಕಲ್ಯಾಣ ವೆಚ್ಚಗಳು :** ೧. ನೈಸರ್ಗಿಕ ವಿಕೋಪಗಳಾದ ಚಂಡಮಾರುತ, ಭೂಕಂಪಗಳ ಪರಿಹಾರ ನಿಧಿಗೆ ದೇಣಿಗೆ ೨. ಧಾರ್ಮಿಕ ಕಾರ್ಯಕ್ರಮಗಳಿಗೆ ದೇಣಿಗೆ ೩. ಯುದ್ಧ ಕಾರ್ಯಾಚರಣೆಯಲ್ಲಿ ವೀರಮರಣ ಹೊಂದಿದ ಕುಟುಂಬಗಳಿಗೆ ಸಹಾಯಧನ, ೪. ಬಡವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಹಾಯಧನ ಮುಂತಾದವು.

ಹೀಗೆ ಈ ಸಹಕಾರಿ ಸಂಘವು ವಿವಿಧ ಬಗೆಗಳಲ್ಲಿ ವೆಚ್ಚವನ್ನು ಮಾಡಬೇಕಾಗುತ್ತದೆ.

**ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ಕಲ್ಲೋಳಿ, ವೆಚ್ಚದ ವಿವರಣೆಯ ಕೋಷ್ಟಕ**

| ಅ. ನಂ | ವರ್ಷ | ವೆಚ್ಚದ ಪ್ರಮಾಣ(ರೂಗಳಲ್ಲಿ) | ಏರಿಕೆ/ಇಳಿಕೆ (ರೂಗಳಲ್ಲಿ) | ಪ್ರತಿಶತ ಪ್ರಮಾಣ |
|---|---|---|---|---|
| ೧. | ೨೦೧೦-೧೧ | ೬.೫೪. ೨೫ ೭೨೭.೬೨ | – | – |
| ೨. | ೨೦೧೧-೧೨ | ೮.೦೬ ೫೭ ೫೪೦.೬೨ | ೧. ೫೨. ೩೧.೮೧೩ | ೨೩.೨೮% |
| ೩. | ೨೦೧೨-೧೩ | ೮, ೮೭, ೯೯, ೦೧೯.೪೨ | ೮೧ ೪೧, ೪೭೮.೮೦ | ೧೦.೦೯% |
| ೪. | ೨೦೧೩-೧೪ | ೧೦, ೭೬ ೩೩ ೨೬೪.೫೮ | ೧, ೮೮, ೩೪ ೨೪೫.೧೬ | ೨೧.೨೦% |
| ೫. | ೨೦೧೪-೧೫ | ೯ ೭೩ ೧೩ ೧೫೮.೭೩ | – ೧೦೩ ೨೦, ೧೦೫.೮೫ | –೯.೫೮೮೨% |

**ಆಧಾರ: ಪತ್ರಿಕೆಗಳು ೨೦೧೦-೧೧ ರಿಂದ ೨೦೧೪-೧೫**

೧. ೨೦೧೦-೧೧ ಕ್ಕೆ ಹೋಲಿಸಿದಾಗ ೨೦೧೧-೧೨ರಲ್ಲಿ ೧೫೨೩೧೮೧೩ ವೆಚ್ಚವಾಗಿರುತ್ತದೆ. ಇಲ್ಲಿ ಪ್ರತಿಶತ ವೆಚ್ಚದ ಪ್ರಮಾಣ ೨೩.೨೮ ರಷ್ಟು ಇರುತ್ತದೆ.

೨. ೨೦೧೨-೧೩ ರಲ್ಲಿ ವೆಚ್ಚದ ಬೆಳವಣಿಗೆ ದರ ೮೧, ೪೧ ೪೭೮.೮೦ ಇದ್ದು ಅದನ್ನು ೨೦೧೧-೧೨ಕ್ಕೆ ಹೋಲಿಸಿದರೆ ಪ್ರತಿಶತ ವೆಚ್ಚದ ಪ್ರಮಾಣ ೦೦.೯ ರಷ್ಟಾಗಿರುತ್ತದೆ.

೩. ೨೦೧೩-೧೪ ರ ಅವಧಿಯಲ್ಲಿ ಒಟ್ಟು ವೆಚ್ಚದ ಬೆಳವಣಿಗೆ ದರ ೧,೮೮, ೬೧ ೨೪೫.೧೬ ಇದ್ದು ಪ್ರತಿಶತ ೨೧.೨೦ ರಷ್ಟು ಇರುತ್ತದೆ.

೪. ೨೦೧೪-೧೫ ರಲ್ಲಿ ವೆಚ್ಚದ ಬೆಳವಣಿಗೆಯ ದರ ೧೦೩, ೨೦, ೧೦೫.೮೫ ಇದ್ದು ಅದನ್ನು ೨೦೧೩-೧೪ರ ಅವಧಿಗೆ ಹೋಲಿಸಿದಾಗ ಪ್ರತಿಶತ ೯.೫೮೮೨ ರಷ್ಟು ಇಳಿಕೆಯಾಗಿರುವುದು ಕಂಡು ಬರುತ್ತದೆ.

ಹೀಗೆ ಈ ಸಹಕಾರಿ ಸಂಘದ ವೆಚ್ಚದ ಬೆಳವಣಿಗೆ ದರದಲ್ಲಿಯೂ ಸಾಕಷ್ಟು ಏರಿಳಿತದ ಪ್ರವೃತ್ತಿಯನ್ನು ಕಾಣುತ್ತೇವೆ.

**೪.೮ ಉಪಸಂಹಾರ :**

ಈ ಅಧ್ಯಾಯದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ಕಲ್ಲೋಳಿಯಲ್ಲಿ ಸದಸ್ಯರ ಏರಿಳಿತ ಪ್ರವೃತ್ತಿ, ಸದಸ್ಯರ ಬೆಳೆವಣಿಗೆಯ ಪರಿಣಾಮ, ಶೇರು ಬಂಡವಾಳದ ಏರಿಳಿತ ಪ್ರವೃತ್ತಿ ಪತ್ತಿನ ಪೂರೈಕೆ ಏರಿಳಿತ ಪ್ರವೃತ್ತಿ ಲಾಭ (ಆದಾಯ) ಮತ್ತು ವೆಚದಲ್ಲಿಯ ಏರಿಳಿತ ಪ್ರವೃತ್ತಿಯನ್ನು ಅಧ್ಯಯನ ಮಾಡಿ, ಮುಂದಿನ ಅಧ್ಯಾಯದಲ್ಲಿ ಸೂಚಿಸಿದ ವಿಷಯಗಳಿಗೆ, ವಿಶ್ಲೇಷಣೆಯಿಂದ ತಿಳಿದುಕೊಂಡ ಹಲವು ಸಂಗತಿಯನ್ನು ಹಾಗೂ ಸಲಹೆಗಳನ್ನು ಕೊಡುವ ಪೂರ್ವಕಾರ್ಯವಾಗಿದೆ.

---

೧) ಪ್ರಾ.ಕೃ.ಪ.ಸ.ಸಂಘ, ಕಲ್ಲೋಳಿ

೨) ೨೦೧೦-೧೧ – ೨೦೧೪-೧೫ ರ ಅಢಾವೆ ಪತ್ರಿಕೆಗಳು.

೩) ೨೦೧೦-೧೧ – ೨೦೧೪-೧೫ ರ ಜಮಾ ಖರ್ಚು ವಾರ್ಷಿಕ ಆರ್ಥಿಕ ವರದಿಗಳು.

೪) ೨೦೧೦-೧೧ – ೨೦೧೪-೧೫ ರ ವ್ಯಾಪಾರಿ ಪತ್ರಿಕೆಯ ಲಾಭ ಹಾನಿ ವರದಿಗಳು.

೫) ೨೦೧೦-೧೧ – ೨೦೧೪-೧೫ ರ ಅಢಾವೆ ಪತ್ರಿಕೆಗಳು.

# ಅಧ್ಯಾಯ – ಐದು

# ಸಮಾರೋಪ

೫.೧ ಪ್ರಸ್ತಾವನೆ

೫.೨ ಅಧ್ಯಾಯನದಿಂದ ಕಂಡುಕೊಂಡ ಫಲಿತಗಳು.

೫.೩ ಸಲಹೆ ಸೂಚನೆಗಳು

೫.೪ ಮುಂದಿನ ಅಧ್ಯಾಯನಕ್ಕೆ ಮಾರ್ಗದರ್ಶನ.

೫.೫ ಅನುಬಂಧ

೫.೬ ಗ್ರಂಥ ಋಣ

೫.೬ ಅಂತರ್ಜಾಲ

# ಅಧ್ಯಾಯ – ಐದು

# ಸಮಾರೋಪ

## ೧. ಪ್ರಸ್ತಾವನೆ :

ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿರುವ ದೋಷಗಳ ನಿವಾರಣೆಗಾಗಿ ಸಹಕಾರ ಇಲಾಖೆಯು ಆದೇಶಿಸುವ ಬದಲಾವಣೆಯ ನಿಯಮಗಳನ್ನು ಪರಿಣಾಮಕಾರಿಯಾಗಿ ಅಳವಡಿಸುವದು ಅವಶ್ಯವಾಗಿದೆ. ಈ ಸಹಕಾರಿ ಸಂಘದ ಆಡಳಿತ ಮತ್ತು ಮೇಲ್ವಿಚಾರಣೆಯನ್ನು ಈ ಸಮೀತಿ (ಮಂಡಳಿ) ನೋಡಿಕೊಳ್ಳುತ್ತದೆ. ಸಾಲ ಪಡೆಯುವ ಮರುಪಾವತಿಯ ಹಾಗೂ ಪಡಿತರ ಧಾನ್ಯವನ್ನು ವಿತರಿಸುವ ಸಂದರ್ಭಗಳಲ್ಲಿ ರೈತ ಸದಸ್ಯರಿಗೆ ಮತ್ತು ಗ್ರಾಹಕರಿಗೆ ಅನೇಕ ಸಮಸ್ಯೆಗಳು ಬರುತ್ತವೆ. ಪಡಿತರ ವಿತರಣೆಯ ಸಂದರ್ಭಗಳಲ್ಲಿ ವ್ಯವಸ್ಥಿತ ರೀತಿಯಿಂದ ಅವ್ಯವಹಾರದ ಚಟುವಟಿಕೆಗಳು ನಡೆಯಬಹುದು.

ಈ ಸಹಕಾರ ಸಂಘದ ವ್ಯವಸ್ಥೆಯು ಹಲವಾರು ನಿರ್ವಹಣಾತ್ಮಕ ಸಮಸ್ಯೆಗಳಿಂದ ಬಳಲುತ್ತಿದ್ದು ರಾಜಕೀಯ ಹಸ್ತಕ್ಷೇಪದಿಂದ ನಿರೀಕ್ಷಿತ ಮಟ್ಟದಲ್ಲಿ ಅಭಿವೃದ್ಧಿ ಸಾಧಿಸಲು ಹಾಗೂ ಸದಸ್ಯರಿಗೆ ಸೇವೆಯನ್ನು ಒದಗಿಸಲು ಸಾಧ್ಯವಾಗುವದಿಲ್ಲ ಈ ಅನೇಕ ಸಮಸ್ಯೆಗಳ ನಿವಾರಣೆಗಾಗಿ ಇದು ಒಂದು ಸೂಕ್ತ ಸಮಯವಾಗಿದೆ.

## ೨. ಅಧ್ಯಯನದ ಫಲಿತಗಳು

ಈ ಸನ್ನಿವೇಶದಲ್ಲಿ ಪ್ರಸ್ತುತ ಅಧ್ಯಯನವು ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ, ಆರ್ಥಿಕ ಅಭಿವೃದ್ಧಿಯ ಬಗೆಗೆ ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಯನದ ಅವಧಿಯಲ್ಲಿ ಕಂಡುಕೊಂಡ ಪ್ರಮುಖ ಫಲಿತಗಳು ಇಂತಿವೆ.

೧) ಕಲ್ಲೋಳಿ ಗ್ರಾಮದಲ್ಲಿ ದಿನಾಂಕ ೫ ಮೇ ೧೯೧೩ ರಂದು ಈ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವನ್ನು ಸ್ಥಾಪಿಸಲಾಯಿತು. ಹಾಗೂ ಉತ್ತಮ ಕಾರ್ಯನಿರ್ವಹಣೆ ಹೊಂದಿರುವುದು ತಿಳಿದು ಬರುತ್ತದೆ.

೨) ಕಲ್ಲೋಳಿ ಪ್ರಾಥಮಿಕ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದಲ್ಲಿ ಬೆಳೆಸಾಲದ ವ್ಯವಹಾರ ಹೆಚ್ಚಿನ ಪ್ರಮಾಣದಲ್ಲಿರುವದು ಕಂಡು ಬರುತ್ತದೆ. ಹಾಗೂ ಮಾಧ್ಯಮಾವಧಿ

ಪತ್ತಿನ ವ್ಯವಹಾರದ ಪ್ರಮಾಣ ಕಡಿಮೆ ಇರುವುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

೩) ೧೯೫೬ ರಲ್ಲಿ ೨೦೦ ಟನ್ ಸಾಮರ್ಥ್ಯದ ಗೋದಾಮು ಮತ್ತು ೧೯೬೯ ರಲ್ಲಿ ೨೦೦ ಟನ್ ಸಾಮರ್ಥ್ಯದ ಗೋದಾಮು ಕಟ್ಟಿಸಿ ಅವುಗಳನ್ನು ಉಪಯೋಗಿಸುತ್ತಿರುತ್ತಿದೆ.

೪) ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಂಘದ, ಸದಸ್ಯರಿಗೆ ಪ್ರತಿಶತ ೫ ರಂತೆ ಲಾಭಾಂಶ ಹಂಚಲಾಗುತ್ತಿರುತ್ತದೆ. ಇತ್ತೀಚೆಗೆ ಸರಕಾರದ ಆದೇಶದ ಪ್ರಕಾರ ಬಡತನ ರೇಖೆ ಕೆಳಗೆ ಜೀವಿಸುವವರೆಗೂ ಸಂಘದ ಸದಸ್ಯತ್ವವನ್ನು ನೀಡಲಾಗಿದೆ.

೫) ೧೯೭೫-೭೬ರಲ್ಲಿ ಕಟ್ಟಿಸಿದ ಕಟ್ಟಡವನ್ನು ಈಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಶಾಖೆಗೆ ಬಾಡಿಗೆ ರೂಪದಲ್ಲಿ ಶಾಖೆಗೆ ಕೊಡಲಾಗಿದೆ.

೬) ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘವು ಬೆಳಗಾವಿ ಜಿಲ್ಲೆಯಲ್ಲಿ ವ್ಯವಹಾರದಲ್ಲಿ ಮೂರನೆಯ ಸ್ಥಾನ ಪಡೆದಿದೆ.

೭) ದಿನಾಂಕ ೦೪-೦೨-೨೦೧೦ ರಂದು ಪ್ರಗತಿಪರ ಸಣ್ಣ ರೈತ ಸದಸ್ಯರಿಗೆ ಆಧುನಿಕ ಬೇಸಾಯಕ್ಕೆ ಶೇಕಡಾ ೩ ರ ಬಡ್ಡಿದರದಲ್ಲಿ ೩೩ ಟ್ರ್ಯಾಕ್ಟರ್‌ಗಳನ್ನು ವಿತರಿಸಲಾಗಿರುವುದು ಕಂಡು ಬಂದಿರುತ್ತದೆ.

೮) ದಿನಾಂಕ : ೧೫/೦೫/೧೯೯೪ ರಲ್ಲಿ ಈ ಸಹಕಾರಿ ಸಂಘದ ಆವರಣದ ಹೆದ್ದಾರಿಗೆ ಹೊಂದಿಕೊಂಡು ೯ ವಾಣಿಜ್ಯ ಮಳಿಗೆಗಳನ್ನು ಕಟ್ಟಿಸಿ ವಿವಿಧ ವ್ಯಾಪಾರಸ್ಥರಿಗೆ ಬಾಡಿಗೆ ರೂಪದಲ್ಲಿ ಕೊಡಲಾಗಿದೆ.

೯) ದಿನಾಂಕ ೧೮-೧೧-೨೦೧೪ ರಲ್ಲಿ ವಾಣಿಜ್ಯ ಮಳಿಗೆಯ ಮೇಲೆ ಕಟ್ಟಿಸಿದ ನೂತನ ಕಾರ್ಯಾಲಯದಲ್ಲಿ ಪತ್ತಿನ ವ್ಯವಹಾರದ ನಿರ್ವಹಣೆಯನ್ನು ಗಣಕೀಕೃತಗೊಳಿಸಲಾಗಿದೆ.

೧೦) ೧೮-೧೧-೨೦೧೪ ರ ಅವಧಿಯಲ್ಲಿ ನವೀಕೃತ ಸೌಕರ್ಯಗಳಿಂದ ಕೂಡಿದ ಅಧ್ಯಕ್ಷರ ಕೊಠಡಿ, ಆಡಳಿತ ಮಂಡಳಿಯ ಸಭಾಭವನ ಕಟ್ಟಿಸಲಾಗಿದೆ.

೧೧) ಗ್ರಾಹಕರಿಗೆ ಆಹಾರ ಧಾನ್ಯಗಳ ವಿತರಣೆಗಾಗಿ ಗಣಕೀಕೃತ ತೂಕದ ವ್ಯವಸ್ಥೆ ಇರುವದು ಕಂಡು ಬರುತ್ತದೆ.

೧೨) ೨೦೧೦ ರಿಂದ ೨೦೧೪ ರವರೆಗೆ ಶೇರು ಬಂಡವಾಳದ ಸಂಗ್ರಹ ಏರಿಕೆ ಪ್ರವೃತಿ೨೦೧೪-೧೫ನೆಯ ಸಾಲಿನಲ್ಲಿ ಶೇರು ಬಂಡವಾಳದ ಸಂಗ್ರಹ ಇಳಿಕೆಯ ಪ್ರವೃತಿಯನ್ನು ತೋರಿಸುತ್ತದೆ.

೧೩) ೨೦೧೦ ರಿಂದ ೨೦೧೪ ರವರೆಗೆ ಈ ಸಂಘದ ಆದಾಯ ಏರಿಕೆ ಪ್ರವೃತ್ತಿ ಮತ್ತು ೨೦೧೪-೧೫ ರಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಆದಾಯವು ಇಳಿಕೆ ಪ್ರವೃತ್ತಿ ಹೊಂದಿರುವದು ಕಂಡು ಬರುತ್ತದೆ.

೧೪) ೨೦೧೦ ರಿಂದ ೨೦೧೩ ರವರೆಗೆ ವ್ಯಾಪಾರ ಪತ್ರಿಕೆಯ ಲಾಭ ಏರಿಕೆ ಪ್ರವೃತ್ತಿ ಮತ್ತು ೨೦೧೩-೧೪ ಮತ್ತು ೨೦೧೪-೧೫ ನೇ ಸಾಲಿನಲ್ಲಿ ವ್ಯಾಪಾರಿ ಪತ್ರಿಕೆಯಲ್ಲಿ ಲಾಭವು ಇಳಿಕೆ ಪ್ರವೃತ್ತಿ ಹೊಂದಿರುವುದು ಕಂಡು ಬರುತ್ತದೆ.

೧೫) ಮಲ್ಲಶಾಲೆ (ಗರಡಿಮನೆ) ಯಲ್ಲಿ ಈಗ ಕುಸ್ತಿಪಟುಗಳ ಸಂಖ್ಯೆ ಕಡಿಮೆಯಾಗುತ್ತಿರುವದು ಕಂಡು ಬರುತ್ತದೆ.

೧೬) ೨೦೧೦ ರಿಂದ ೨೦೧೪ ರವರೆಗೆ ಈ ಸಹಕಾರಿ ಸಂಘದ ಸದಸ್ಯರ ಪ್ರಮಾಣ ಏರಿಕೆಯ ಪ್ರವೃತ್ತಿ ೨೦೧೪-೧೫ ರಲ್ಲಿ ಇಳಿಕೆ ಪ್ರವೃತ್ತಿ ಹೊಂದಿರುವದು ಕಂಡು ಬರುತ್ತದೆ.

೧೭) ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ೨೦೧೦ ರಿಂದ ೨೦೧೨ ವರೆಗೆ ರೈತರಿಗೆ ಒದಗಿಸಿದ ಪತ್ತಿನ ಸೌಲಭ್ಯದ ಪ್ರಮಾಣ ಏರಿಕೆ ಪ್ರವೃತ್ತಿ ೨೦೧೨-೧೩ ರಲ್ಲಿ ಇಳಿಕೆ ಪ್ರವೃತ್ತಿ ೨೦೧೩-೧೪ ರಲ್ಲಿ ಮತ್ತೆ ಏರಿಕೆ ಪ್ರವೃತ್ತಿ ನಂತರ ೨೦೧೪-೧೫ ನೇ ಸಾಲಿನಲ್ಲಿ ಇಳಿಕೆ ಪ್ರವೃತ್ತಿಯನ್ನು ಹೊಂದಿರುವದು ಕಂಡು ಬರುತ್ತದೆ.

೧೮) ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದಲ್ಲಿ ಪ್ರಮುಖವಾಗಿ ಕಂಡು ಬರುವ ವಿಷಯ ಏನೆಂದರೆ ವಿವಿಧ ರಾಜಕೀಯ ಪಕ್ಷಗಳ ಸದಸ್ಯರು ಇರುವದರಿಂದ ಯಾವುದೇ ರಾಜಕೀಯ ಮಾಡದೇ ಕೂಡಿ ಬಾಳಿದರೆ ಸ್ವರ್ಗ ಸುಖ ಎನ್ನುವ ಹಾಗೆ ಸಂಘದ ಆರ್ಥಿಕ ಅಭಿವೃದ್ಧಿಯಲ್ಲಿ ಪಾಲ್ಗೋಳ್ಳುತ್ತಾರೆ.

## ೩. ಸಲಹೆ ಸೂಚನೆಗಳು

೧. ಈ ಸಹಕಾರಿ ಸಂಘದ ಸದಸ್ಯರಿಗೆ ಆಧುನಿಕ ಬೇಸಾಯಕ್ಕೆ ಒದಗಿಸುವ ಸೌಲಭ್ಯಗಳ ಬಗ್ಗೆ ಪ್ರೊಜೇಕ್ಟರ್, ಕರಪತ್ರ, ಭಿತ್ತಿ ಪತ್ರ ಮತ್ತು ಮಾಧ್ಯಮಗಳಲ್ಲಿ ಪ್ರಸಾರಗೊಳಿಸಬೇಕು.

೨. ಹೆಚ್ಚಿನ ಬಡ್ಡಿದರದಲ್ಲಿ ರೈತರಿಗೆ ಸಾಲ ನೀಡುವ ಸರ್ಕಾರೇತರ ಹಣಕಾಸಿನ ಸಂಸ್ಥೆಗಳಿಗೆ ಮತ್ತು ಲೇವಾದೇವಿ ವ್ಯವಹಾರಸ್ಥರ ಕಡೆಗೆ ಹೋಗದಂತೆ ರೈತ ಸದಸ್ಯರನ್ನು ತಡೆಯಬಹುದು.

೩. ಈ ವಾಣಿಜ್ಯ ಮಳಿಗೆಗಳನ್ನು ಪರಿಣಾಮಕಾರಿಯಾಗಿ ಸಮರ್ಥವಾಗಿ ಉಪಯೋಗಿಸಿಕೊಳ್ಳಬೇಕು.

೪. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಿಬ್ಬಂದಿಯ ಕಾರ್ಯದಕ್ಷತೆಯನ್ನು ಹೆಚ್ಚಿಸಲು ಸಹಕಾರ ಇಲಾಖೆಯಿಂದ ತರಬೇತಿ ಕೊಡಿಸುವದು.

೫. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ಇರುವ ಪ್ರದೇಶ ವಾಣಿಜ್ಯಕರಣವಾಗುವದರಿಂದ ಉಪಹಾರ (ಕ್ಯಾಂಟಿನ್) ಗ್ರಹದ ವ್ಯವಸ್ಥೆ ಮಾಡಬೇಕು.

೬. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸದಸ್ಯರಿಗೆ ಜೀವ ವಿಮಾ ಸೌಲಭ್ಯ ಒದಗಿಸಿದರೆ ಅನುಕೂಲವಾಗುತ್ತದೆ.

೭. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸೇವೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಬಲಪಡಿಸಬೇಕು ಇನ್ನು ಮೂರು ಜನ ಸಿಬ್ಬಂದಿಯನ್ನು ನೇಮಕ ಮಾಡಿಕೊಂಡರೆ ಸದಸ್ಯರಿಗೆ ಕೊಡುವ ಸೇವೆ ಅನುಕೂಲವಾಗುತ್ತದೆ.

೮. ಮೇಲಿಂದ ಮೇಲೆ ಪತ್ತಿನ ಸೌಲಭ್ಯ, ಉತ್ತಮ ಬೀಜಗಳು, ಸಾವಯವ ಗೊಬ್ಬರದ ಬಗ್ಗೆ ರೈತ ಸದಸ್ಯರಿಗೆ ವಿಚಾರ ಕಮ್ಮಟಗಳನ್ನು, ಸಂಕೀರ್ಣಗಳನ್ನು, ಕೃಷಿ ಹಾಗೂ ತೋಟಗಾರಿಕೆ ವಿಶ್ವವಿದ್ಯಾಲಯ ಮತ್ತು ಕೃಷಿ ಇಲಾಖೆ ಸಹಯೋಗದೊಂದಿಗೆ ನಡೆಸಬೇಕು.

೯. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಬಗ್ಗೆ ಸಂಶೋಧನೆ ಕೈಗೊಳ್ಳುವ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಸಹಕಾರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಗ್ರಂಥಾಲಯಕ್ಕೆ ಒದಗಿಸುವ ವ್ಯವಸ್ಥೆ ಮಾಡಬೇಕು. ಇಲ್ಲವೇ ಗ್ರಂಥಾಲಯ ವ್ಯವಸ್ಥೆ ಮಾಡಿದರೆ ಇನ್ನೂ ಅನುಕೂಲವಾಗುತ್ತದೆ.

೧೦. ಮಾಧ್ಯಮಿಕ ಹಂತದಿಂದಲೇ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ಬಗ್ಗೆ ಜ್ಞಾನ ಕೊಡುವದಕ್ಕಾಗಿ ಶಾಲಾ ಪಠ್ಯಕ್ರಮವನ್ನು ರಚಿಸುವಂತೆ ಪ್ರೇರೇಪಿಸಬೇಕು.

೧೧. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಭದ್ರತೆ ದೃಷ್ಟಿಯಿಂದ ರಾತ್ರಿ ಕಾವಲುಗಾರನನ್ನು ನೇಮಿಸಬೇಕು.

೧೨. ಈ ಸಹಕಾರಿ ಸಂಘದ ವತಿಯಿಂದ ಸದಸ್ಯರಿಗೆ ಶುದ್ಧ ನೀರಿನ ಘಟಕದ ವ್ಯವಸ್ಥೆ ಮಾಡಬೇಕು.

೧೩. ಈಗ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ ಶಾಖೆಗೆ ಬಾಡಿಗೆ ನೀಡಿದ ಕಟ್ಟಡವನ್ನು ರೈತ ಸದಸ್ಯರ ಭವನವನ್ನಾಗಿ ನವೀಕರಿಸಬೇಕು.

೧೪. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಆವರಣದ ಬಾಂದಾರಾ ಕಾಲುವೆ ಕಡೆಗೆ ಇರುವ ವಾಣಿಜ್ಯ ಮಳಿಗೆಗಳ ಮೇಲೆ ನವೀಕೃತ ಕಟ್ಟಡವನ್ನು ಕಟ್ಟಿಸಿ ಅದನ್ನು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ ಶಾಖೆಗೆ ಬಾಡಿಗೆ ರೂಪದಲ್ಲಿ ಕೊಡುವುದರಿಂದ ಸಂಘಕ್ಕೆ ಆದಾಯಬರುತ್ತದೆ.

೧೫. ಕುಸ್ತಿಪಟುಗಳು ಕ್ರೀಢೆಯಲ್ಲಿ ಹೆಚ್ಚು ಆಸಕ್ತಿ ವಹಿಸುವಂತೆ ಪ್ರೋತ್ಸಾಹಿಸಬೇಕು.

೧೬. ರೈತ ಸದಸ್ಯರು ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಆರ್ಥಿಕ ಅಭಿವೃದ್ಧಿಯಲ್ಲಿ ಸಕ್ರೀಯವಾಗಿ ಭಾಗವಹಿಸುವಂತೆ ಪ್ರೋತ್ಸಾಹಿಸುವದು.

೧೭. ರಾಜಕೀಯ ಹಸ್ತಕ್ಷೇಪದಿಂದ ಈ ಸಹಕಾರಿ ಸಂಘವನ್ನು ಮುಕ್ತಗೊಳಿಸುವದು.

೧೮. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವನ್ನು ಬಲಪಡಿಸಲು ವ್ಯಾಪಾರ ಅಭಿವೃದ್ದಿಪಡಿಸಲು ವ್ಯಾಪಾರ ಯೋಜನೆಯನ್ನು ಅಳವಡಿಸಿ ಪರಿಣಾಮಕಾರಿಯಾಗಿ ಜಾರಿಗೊಳಿಸುವ ಮೂಲಕ ರೈತರಿಗೆ ಸುಲಭವಾಗಿ ಸಾಲ ತಲುಪಿಸುವ ವ್ಯವಸ್ಥೆಯನ್ನು ಬಲಪಡಿಸುವುದು.

೧೯. ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಎಲ್ಲಾ ಸದಸ್ಯರುಗಳಿಗೆ ಆರೋಗ್ಯ ರಕ್ಷಣೆ ಯೋಜನೆಯನ್ನು ವಿಸ್ತರಿಸುವುದು.

೨೦. ಸಹಕಾರ ಚಳುವಳಿಯಲ್ಲಿ ಮಹಿಳೆಯರು ಹಾಗೂ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗದವರು ಸಕ್ರಿಯವಾಗಿ ಪಾಲ್ಗೊಳ್ಳಲು ಉತ್ತೇಜಿಸುವುದು.

೨೧. ಗ್ರಾಮ ಮಟ್ಟದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಕ್ಕೆ ಪೂರಕವಾಗುವಂತೆ ಸಮಗ್ರ ಅಭಿವೃದ್ಧಿಯ ಮೂಲಕ ಮೂಲಭೂತ ಸೌಕರ್ಯಗಳು ಮತ್ತು ಆರ್ಥಿಕ ಸ್ಥಿತಿಯನ್ನು ಬಲಪಡಿಸುವುದು.

೨೨. ಕಾರ್ಯಸಮರ್ಥತೆ ಸುಧಾರಿಸಲು ಕಛೇರಿ ನಿರ್ವಹಣಾ ವ್ಯವಸ್ಥೆಯನ್ನು ಆಧುನೀಕರಣಗೊಳಿಸುವುದು.

ಈ ಮೇಲಿನ ಸಲಹೆಗಳನ್ನು ಅಳವಡಿಸಿಕೊಂಡಿದ್ದೇ ಆದರೆ ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘವು ಬದಲಾಗುತ್ತಿರುವ ಪರಿಸ್ಥಿತಿಗೆ ಅನುಗುಣವಾಗಿ ಹಾಗೂ ಅಧಿಕ ಬಡ್ಡಿಯ ಲೇವಾದೇವಿಗಾರರಿಂದ ಅಧಿಕ ಬಡ್ಡಿ ಆಕರಿಸುವ ಸರ್ಕಾರೇತರ ಹಣಕಾಸಿನ ಸಂಸ್ಥೆಗಳ ಆತಂಕಾರಿ ಸಂಗತಿಗಳಿಂದಾಗುವ ದುಷ್ಪರಿಣಾಮಗಳಿಂದ ರಕ್ಷಣೆಯನ್ನು ಪಡೆದು, ಸಾಲದ ಋಣದಿಂದ ಮುಕ್ತವಾಗಿ ಈ ಸಹಕಾರಿ ಸಂಘವನ್ನು ಆರ್ಥಿಕವಾಗಿ ಅಭಿವೃದ್ಧಿ ಪಡಿಸಲು ಸಾಧ್ಯವಾಗುತ್ತದೆ.

## ಮುಂದಿನ ಅಧ್ಯಯನಕ್ಕೆ ಮಾರ್ಗದರ್ಶನ :

೧) ವಿವಿಧ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳ ತುಲನಾತ್ಮಕವಾಗಿ ಅಧ್ಯಯನವನ್ನು ಕೈಗೊಳ್ಳಬಹುದು.

೨) ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ಕಲ್ಲೋಳಿಯ ವೆಚ್ಚ ಲಾಭ ಮತ್ತು ಸೇವೆಗಳ ವಿಶ್ಲೇಷಣಾ ಅಧ್ಯಯನವನ್ನು ಮಾಡಬಹುದು.

೩) ಪತ್ತಿನ ಸದುಪಯೋಗದ ತುಲನಾತ್ಮಕ ಅಧ್ಯಯನ ಕೈಗೊಳ್ಳಬಹುದು.

# ಅನುಬಂಧಗಳು

# ಗ್ರಂಥ ಋಣ


೧. ಸಹಕಾರದ ತತ್ವಗಳು : ಇ.ಎಸ್.ಬೊಗಾರ್ಡಸ್.

೨. ಕರ್ನಾಟಕ ಸಹಕಾರ ಸಂಘಗಳ ಅದಿನಿಯಮ ೧೯೫೯ ಮತ್ತು ನಿಯಮಗಳು ೧೯೬೬ : ಸಂ.ಎಸ್.ಎಸ್.ಹಾದಿಮನಿ. ವಿಜಯ ಶ್ರೀ ಪ್ರಕಾಶನ ರತ್ನಗಿರಿ ಧಾರವಾಡ ೫೮೦೦೦೪.

೩. ಸಹಕಾರ ಪರಿಚಯ : ಎಚ್.ಜಯದೇವ ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರ–೧೮.

೪.ಸಹಕಾರ ತತ್ವಗಳ ಹಾಗೂ ಸಮಸ್ಯೆಗಳು : ಎ.ಪಿ.ಶ್ರೀನಿವಾಸಮೂರ್ತಿ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಜಿ.ಆರ್.ಪ್ರಿಟಿಂಗ್ ಪ್ರೆಸ್ ಯಾದವಗಿರಿ ಮೈಸೂರು ೫೭೦೦೦೨.

೫. ಸಹಕಾರ ಪಿತಾಮಹ ಶ್ರೀ ಸಿದ್ದನಗೌಡ ಪಾಟೀಲ : ಎಂ.ಮಂಜುನಾಥ ದೊಮ್ಮನಕಟ್ಟಿ. ಧನ್ಯಾ ಪ್ರಕಾಶನ ಶಿಗ್ಲಿ – ೫೮೨೨೧೦ ಶಿರಹಟ್ಟಿ ಗದಗ.

೬. ಕಲ್ಲೋಳಿ ಬೌಗೋಳಿಕ ಓಸ್ನೆಲೆ : ಗ್ರಾಮ ಲೆಕ್ಕಾಧಿಕಾರಿ, ಕಲ್ಲೋಳಿ

೭. ಸಹಕಾರಿ ಪ್ರಭೆ : ಶತಮಾನೋತ್ಸವದ ಸ್ಮರಣ ಸಂಚಿಕೆ ೨೦೧೪ ಸುರೇಶ ಹಣಗಂಡಿ, ಶಂಕರ ನಿಂಗನೂರ ಮತ್ತು ಪ್ರೊ.ಕೆ.ಎಸ್.ಪರವ್ವಗೋಳ

೮. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ ಇದರ ಉಪವಿಧಿಗಳು. : ಬೆಳಗಾವಿ ಜಿಲ್ಲೆ ಸಹಕಾರಿ ಯುನಿಯನ್ ನಿಯಮಿತ ೧೫೦ ಬಾಂದೂರ ಗಲ್ಲಿ ಬೆಳಗಾವಿ.

# ವರದಿಗಳು

೧. ಸದಸ್ಯರ ವಿವರ : ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ, ಕಲ್ಲೋಳಿ

೨. ೨೦೧೦-೧೧ – ೨೦೧೪-೧೫ ರ ಜಮಾ ಖರ್ಚು ವಾರ್ಷಿಕ ಆರ್ಥಿಕ ವರದಿಗಳು.

೩. ೨೦೧೦-೧೫ ರ ವ್ಯಾಪಾರಿ ಪತ್ರಿಕೆಯ ಲಾಭ-ಹಾನಿ ಪತ್ರಿಕೆಗಳು.

೪. ೨೦೧೦-೧೫ ಅಡಾವೆ ಪತ್ರಿಕೆಗಳು

# ಅಂತರ್ಜಾಲ

1. www.sahakarindia.co.in
2. www.sahakarkarnataka.co.in

## ಅನುಬಂಧ-೧

### ಕಲ್ಲೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಂಸ್ಥಾಪಕರ ಭಾವಚಿತ್ರ



ದಿ. ಶ್ರೀ ಪರಪ್ಪಾ ವೀರಪ್ಪಾ ಪಾಟೀಲ
ಕಲ್ಲೋಳಿ ಗ್ರಾಮದ ಸಹಕಾರಿ ಸಂಘದ ಸಂಸ್ಥಾಪಕರು

# ಕರ್ನಾಟಕ ಸರಕಾರ ಸಹಕಾರ ಇಲಾಖೆಯ ಪ್ರಕಾರ ಸಂಘದ ಹೆಸರು ಬದಲಾದ ನೊಂದಣಿ ಪ್ರಮಾಣ ಪತ್ರಗಳು

ಕರ್ನಾಟಕ ಸರಕಾರ

ಕ್ರ. [illegible] (ಸಹಕಾರ ಇಲಾಖೆ) ದಿನಾಂಕ : [illegible]-11-[illegible]

## ನೋಂದಣಿ ಪ್ರಮಾಣ ಪತ್ರ

(ಕ.ಸ.ಸಂ. ಕಾಯಿದೆ ಕಲಂ 10(2) ರ ಕೆಳಗೆ ಕೊಡಲಾಗಿದೆ)

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೈಲಹೊಂಗಲ ಉಪ ವಿಭಾಗ ಬೈಲಹೊಂಗಲ ಇವರು ಈ ಮೂಲಕ ಅಧಿಸೂಚಿಸುವುದೇನೆಂದರೆ. [illegible] ಇದರ ನೋಂದಣಿ ಪ್ರಮಾಣ ಪತ್ರವನ್ನು ತಿದ್ದುಪಡಿ ಮಾಡಿ [illegible] ಅಂತಾ ಹೆಸರಿಸಿ ಇದನ್ನು ದಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959, ಕಲಂ 10(2) ರನ್ವಯ ಪ್ರಮಾಣ ಪತ್ರ ನೀಡಲಾಗಿದೆ.

(ಬಿ. ಎಚ್. ಜಗದಾಳ)
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಬೈಲಹೊಂಗಲ ಉಪವಿಭಾಗ
ಬೈಲಹೊಂಗಲ.

ಬೈಲಹೊಂಗಲ
ದಿನಾಂಕ : [illegible]

---

ಕರ್ನಾಟಕ ಸರಕಾರ

ರ.ನಂ. 582 (ಸಹಕಾರ ಇಲಾಖೆ ) ದಿನಾಂಕ : 05-05-1913

## ನೋಂದಣಿ ಪ್ರಮಾಣ ಪತ್ರ

(ಕ.ಸ.ಸಂ. ಕಾಯಿದೆ ಕಲಂ 10 (2) ರ ಕೆಳಗೆ ಕೊಡಲಾಗಿದೆ)

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೈಲಹೊಂಗಲ ಉಪ ವಿಭಾಗ, ಬೈಲಹೊಂಗಲ ಇವರು ಈ ಮೂಲಕ ಅಧಿಸೂಚಿಸುವದೇನೆಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಬ್ಯಾಂಕ ನಿ., ಕಲ್ಲೋಳಿ ತಾ: ಗೋಕಾಕ ಇದರ ನೋಂದಣಿ ಪ್ರಮಾಣ ಪತ್ರವನ್ನು ತಿದ್ದುಪಡಿ ಮಾಡಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ., ಕಲ್ಲೋಳಿ ತಾ. ಗೋಕಾಕ ಅಂತಾ ಹೆಸರಿಸಿ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959, ಕಲಂ 10(2) ರನ್ವಯ ಪ್ರಮಾಣ ಪತ್ರ ನೀಡಲಾಗಿದೆ.

(ಎಸ್. ಜೆ. ಕುಲಕರ್ಣಿ)
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಬೈಲಹೊಂಗಲ, ಉಪ ವಿಭಾಗ
ಬೈಲಹೊಂಗಲ

ಬೈಲಹೊಂಗಲ
ದಿನಾಂಕ : 03-05-2010

ಕಲ್ಲೋಳಿಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಅಧ್ಯಕ್ಷರು ಶ್ರೀ ಬಾಳಪ್ಪ ಬ. ಬೆಳಕೂಡ ಅವರಿಗೆ ೬೧ನೇ ಅಖಿಲ ಭಾರತ ಸಹಕಾರ ಸಪ್ತಾಹ ೨೦೧೪ ರ ಸಮಾರೋಪ ಕಾರ್ಯಕ್ರಮದಲ್ಲಿ “ಶ್ರೇಷ್ಠ ಸಹಕಾರಿ ಪ್ರಶಸ್ತಿ” ಪತ್ರವನ್ನು ನೀಡಿ ಗೌರವಿಸಿದ ಪ್ರಶಸ್ತಿ.




ಈ ಸಹಕಾರಿ ಸಂಘದ ಪ್ರಸ್ತುತ ಅಧ್ಯಕ್ಷರಾದ ಬಾಳಪ್ಪ ಬ. ಬೆಳಕೂಡ ಅವರಿಗೆ ೨೦೧೪ ರಲ್ಲಿ ದೊರೆತ ‘ಶ್ರೇಷ್ಠ ಸಹಕಾರಿ ಪ್ರಶಸ್ತಿ’.

